25

# ಅಚಲ

ಬಿಡಿಪ್ರತಿ : 4 ರೂ.

ತಿಂಗಳ ಪತ್ರಿಕೆ

ಜೂನ್ 2007

## ಒಳಗೇನಿದೆ







ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,

ಬೆಂಗಳೂರು

# ಅಚಲ

ಸಂಪುಟ - 22 ಸಂಚಿಕೆ 6

*ಸಂಪಾದಕ ಮಂಡಳಿ*

ಎನ್. ಗಾಯತ್ರಿ

ನೇಮಿಚಂದ್ರ, ದೇವಿ,

ಶಾಂತಾ ನಾಗರಾಜ್

ಹೆಚ್. ಎನ್. ಗೀತಾ

ಹೇಮಲತಾ ಮಹಿಷಿ

*ಪ್ರಕಾಶಕರು*

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ

ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು.

ಎಂ.ಓ. ಫಾರ್ಮಿನ ಕೊನೆಯ ಭಾಗದಲ್ಲಿ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.

**Achala - Edited by Dr. N. Gayathri**

**Published by Dr. G. Ramakrishna on behalf of Jagruthi Mahila Adhyayana Kendra**

**Printed at LIPI MUDRANA Bangalore - 560 004**


ಓದುಗರೊಂದಿಗೆ.......

೧೯೮೬ರಿಂದ ಈ ಪತ್ರಿಕೆಯು ನಿಯತವಾಗಿ ಪ್ರಕಟವಾಗುತ್ತಾ ಬಂದಿದೆ. ಮೊದಲಿಗೆ 'ಸಂಗಾತಿ'ಯಾಗಿದ್ದು ಆಮೇಲೆ 'ಪ್ರಿಯಸಂಗಾತಿ'ಯಾಗಿ, ನಂತರ 'ಅಚಲ' ಆಗಿ ಪತ್ರಿಕೆಯು ಕ್ಲುಪ್ತವಾಗಿ ಹೊರಬರುತ್ತಿದ್ದಿತು. ಯಾವ ಸಂಚಿಕೆಯೂ ಪ್ರಕಟವಾಗದೆ ಉಳಿದಿಲ್ಲ. ಕೆಲವು ಬಾರಿ ಮಾತ್ರ ಎರಡು ಸಂಚಿಕೆಗಳನ್ನು ಸೇರಿಸಿ ಒಂದು ಸಂಚಿಕೆಯಾಗಿ ಹೊರತರಲಾಗಿದ್ದಿತು. ಸಾಹಿತ್ಯದ ಎಲ್ಲ ಪ್ರಕಾರಗಳೂ ಪತ್ರಿಕೆಯಲ್ಲಿ ಪ್ರತಿನಿಧಿಸಲ್ಪಟ್ಟಿವೆ. ಅಂತೆಯೇ ಸಮಾಜ ಶಾಸ್ತ್ರೀಯ ಅಧ್ಯಯನಗಳು ಹೇರಳವಾಗಿ ಪ್ರಕಟವಾಗಿವೆ. ಇಪ್ಪತ್ತಕ್ಕೂ ಹೆಚ್ಚು ವರ್ಷಗಳ ಕಾಲ 'ಅಚಲ' ಪತ್ರಿಕೆಯನ್ನು ನಡೆಸಲು ಸಹಕಾರ ನೀಡಿದ ಎಲ್ಲ ಓದುಗರಿಗೆ, ಲೇಖಕರಿಗೆ ಮತ್ತು ಸಂಪಾದಕ ಮಂಡಲಿಯಲ್ಲಿ ಜವಾಬ್ದಾರಿಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ ಎಲ್ಲ ಸ್ನೇಹಿತರಿಗೆ ಕೃತಜ್ಞನಾಗಿದ್ದೇನೆ. ನಾನು ಈ ಪತ್ರಿಕೆಯ ಪ್ರಕಾಶಕನ ಸ್ಥಾನ ಗಳಿಸಿದ್ದು ಕೇವಲ ಕೆಲವು ತಾಂತ್ರಿಕ ಕಾರಣಗಳಿಂದಾಗಿ, ಅಷ್ಟೆ. ಅಂದರೆ, ಹೆಸರಿಗೆ ಮಾತ್ರ ನಾನು ಪ್ರಕಾಶಕ. ವಾಸ್ತವಿಕವಾಗಿ ಅದು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಪತ್ರಿಕೆ. ಎಲ್ಲ ಕೆಲಸಗಳನ್ನು ಮಾಡಿದವರು ಡಾ|| ಎನ್. ಗಾಯತ್ರಿ ಮತ್ತು ಇತರ ಸದಸ್ಯರು. ಈಗ ಪತ್ರಿಕೆಯ ಪ್ರಕಟಣೆಯನ್ನು ನಿಲ್ಲಿಸಿ ಬೇರೆ ಕಾರ್ಯಗಳನ್ನು ಮೊದಲಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಕೈಗೊಳ್ಳಬೇಕೆಂದು 'ಜಾಗೃತಿ' ಹಾಗೂ 'ಅಚಲ' ಸಂಪಾದಕ ಮಂಡಲಿ ನಿರ್ಧರಿಸಿವೆ. ಪತ್ರಿಕೆಯನ್ನುಳಿದು ಬೇರೆಲ್ಲ ಪ್ರಕಟಣೆಗಳು ಯಥಾವತ್ತಾಗಿ ಮುಂದುವರಿಯುತ್ತವೆ. ಇತರ ಚಟುವಟಿಕೆಗಳು ಇನ್ನೂ ವಿಸ್ತಾರಗೊಳ್ಳುವ ನಿರೀಕ್ಷೆ ಇದೆ. ಪತ್ರಿಕೆಯನ್ನು ಬೆಂಬಲಿಸಿದಂತೆ 'ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ'ದ ಕಾರ್ಯಕ್ರಮಗಳಿಗೆ ಒತ್ತಾಸೆ ನೀಡಿ, ಸ್ವತಃ ನೀವು ನೇರವಾಗಿ ಅವುಗಳಲ್ಲಿ ಭಾಗವಹಿಸುತ್ತೀರೆಂಬ ಭರವಸೆ ಇಟ್ಟುಕೊಂಡಿರುತ್ತೇವೆ. ಆದ್ದರಿಂದ ಇದು ವಿದಾಯವಲ್ಲ ; ಬದಲಾಗಿ, ಸಂಪರ್ಕ ಮತ್ತು ಕ್ರಿಯೆಗಳ ಬೇರೊಂದು ವೇದಿಕೆಗೆ ಆಹ್ವಾನವೆಂದು ತಿಳಿಯಬೇಕಾಗಿ ವಿನಂತಿಸಿಕೊಳ್ಳುತ್ತೇನೆ.

*– ಡಾ|| ಜಿ. ರಾಮಕೃಷ್ಣ*

## ಸಂಪಾದಕೀಯ

### ವಿದಾಯಕ್ಕೆ ಮುನ್ನ ......

ಅಂತರರಾಷ್ಟ್ರೀಯ ಮಹಿಳಾ ದಶಕದ ಅಂಚಿನಲ್ಲಿ ಹುಟ್ಟಿದ್ದು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ. ಹಲವು ವರ್ಷಗಳ ಮಹಿಳಾ ಸಂಘಟನೆ ಮತ್ತು ಬಂಡಾಯ ಸಾಹಿತ್ಯ ಹಾಗೂ ಸಮುದಾಯ ಸಂಘಟನೆಗಳಲ್ಲಿನ ಭಾಗವಹಿಸುವಿಕೆಯ ಅನುಭವದ ಹಿನ್ನೆಲೆಯಲ್ಲಿ 1985 ರ ಮಾರ್ಚ್ ತಿಂಗಳಲ್ಲಿ ಆರಂಭವಾದ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಹಲವಾರು ಚಟುವಟಿಕೆಗಳಲ್ಲಿ 'ಅಚಲ' ಪತ್ರಿಕೆಯು ಪ್ರಮುಖವಾದದ್ದು. ಅಂದಿನ ಕರ್ನಾಟಕದ ಸಾಮಾಜಿಕ ಚಳುವಳಿಗಳಲ್ಲಿ ತೊಡಗಿಕೊಂಡಿದ್ದ ಹಲವಾರು ಪ್ರಗತಿಶೀಲರ, ವಿಚಾರವಂತರ ಸಹಾಯ, ಪ್ರೋತ್ಸಾಹ ಮತ್ತು ಭಾಗವಹಿಸುವಿಕೆಯಿಂದ ಜೀವ ಪಡೆಯುತ್ತಾ ಸಮಾಜದ ಧ್ವನಿಯಾಗುವಲ್ಲಿ ಅಚಲ ಯಶಸ್ವಿಯಾಯಿತು. ಅಂದಿನ ಮಹಿಳಾ ಚಳುವಳಿಯ ಹಲವಾರು ಆಯಾಮಗಳನ್ನು ಪ್ರತಿನಿಧಿಸುವುದು 'ಅಚಲ'ಗೆ ಸಾಧ್ಯವಾಯಿತು. ನಾಡಿನ ಲೇಖಕ-ಲೇಖಕಿಯರು, ಸಾಮಾಜಿಕ ಚಳುವಳಿಯ ಕಾರ್ಯಕರ್ತರು ಮತ್ತು ನೇತಾರರು ಹಾಗೂ ವಿಚಾರವಾದಿಗಳು ಪತ್ರಿಕೆಯ ಮೂಲಕ ಚಳುವಳಿಯಲ್ಲಿ ಭಾಗವಹಿಸಿದ್ದಾರೆ. ಪತ್ರಿಕೆಯ ಆರಂಭದ ಒಂದು ದಶಕದಲ್ಲಿ ಕರ್ನಾಟಕದಲ್ಲಿ ಸಾಮಾಜಿಕ ಚಳುವಳಿಗಳೂ ಪ್ರಖರವಾಗಿದ್ದು ಪತ್ರಿಕೆಯ ಅರ್ಥಪೂರ್ಣ ಬೆಳವಣಿಗೆಗೆ ಸಹಕಾರಿಯಾಯಿತು. ಪತ್ರಿಕೆ ಚರ್ಚೆಗೆ ಎತ್ತಿಕೊಂಡ ವಿಷಯಗಳು ಹಲವಾರು. ಕೋಲಾರದ ಅನಸೂಯಮ್ಮನ ಪ್ರಕರಣ, ಕುದುರೆಮೋತಿ ಪ್ರಕರಣ, ಪದ್ಮಕ್ಕ ಹಾಗೂ ಶಶಿಕಲಾಳ ಸಾವಿನಿಂದ ಹಿಡಿದು ಭಾಂವ್ರಿದೇವಿ, ರೂಪ್ ಕನ್ವರ, ರೂಪನ್ ಬಜಾಜ್‌ವರೆಗಾದ ಅನ್ಯಾಯ, ದೌರ್ಜನ್ಯದವರೆಗೂ ಪತ್ರಕೆ ಧ್ವನಿಯೆತ್ತಿ ಪ್ರತಿಭಟಿಸಿತು. ಕ್ವಿನೆಕ್ರಾನ್ ಗರ್ಭನಿರೋಧಕ ಗುಳಿಗೆ, ವಿಶ್ವಸುಂದರಿ ಸ್ಪರ್ಧೆ, ದೇಶದಲ್ಲಿ ತಾಂಡವವಾಡಿದ ಕೋಮುಹಿಂಸೆ, ಮದ್ಯಪಾನ ನಿಷೇಧದ ಸಂಗತಿಗಳನ್ನೂ ಪತ್ರಿಕೆ ಚರ್ಚಿಸಿತು. ಇವುಗಳನ್ನು ಚರ್ಚಿಸುವುದಷ್ಟೇ ಅಲ್ಲ, ಕ್ರಿಯಾಶೀಲವಾಗಿ ಪ್ರತಿಭಟಿಸಲು ಅಧ್ಯಯನ ಕೇಂದ್ರ ಬೀದಿಗೂ ಇಳಿಯಿತು. ಈ ಇಪ್ಪತ್ತೆರಡು ವರ್ಷಗಳ ಅವಧಿಯಲ್ಲಿ ಬದಲಾಗುತ್ತಾ ಬಂದ ಮಹಿಳಾ ಪರ ಕಾನೂನುಗಳನ್ನು ಓದುಗರಿಗೆ ಅರ್ಥ ಮಾಡಿಸುತ್ತಾ, ಅವುಗಳ ಜಾರಿಗಾಗಿ ನಡೆಯಬೇಕಾದ ಹೋರಾಟಕ್ಕೆ ನಾಂದಿಯನ್ನು ಹಾಡುವಲ್ಲಿ 'ಅಚಲ' ಯಶಸ್ವಿಯಾಯಿತು.

'ಅಚಲ' ಆರಂಭವಾದಾಗ ಮಾರ್ಗ್‌ರೆಟ್ ಬಿಸ್ವಾಸ್, ನೇಮಿಚಂದ್ರ, ಲಕ್ಷ್ಮೀ ಚಂದ್ರಶೇಖರ್, ಗಾಯತ್ರಿದೇವಿ, ಶ್ಯಾಮಲಾ ದೇವಿ ಮತ್ತು ಎನ್.ಗಾಯತ್ರಿಯವರಿದ್ದ ಸಂಪಾದಕ ಮಂಡಳಿಗೆ ಹೆಗಲುಕೊಟ್ಟು ಪ್ರೋತ್ಸಾಹಿಸಿದ ವಿ.ಸುಭದ್ರಾ, ಶಾಂತಮ್ಮ, ಮಾಲತಿ ಪಾರ್ಥಸಾರಥಿಯವರ ಪ್ರೋತ್ಸಾಹ, ಬೆಂಬಲಗಳು ಮರೆಯಲಾಗದವು. ಸ್ವತಃ ಪತ್ರಿಕೆಯ ಪ್ರಕಾಶಕರಾಗುವುದಷ್ಟೇ ಅಲ್ಲದೆ ಪತ್ರಿಕೆಗೆ ನಿರಂತರ ಬೆಂಬಲ ನೀಡುತ್ತಾ ಬಂದವರು ಡಾ॥ ಜಿ.ಆರ್. ಅವರು.

ಇಪ್ಪತ್ತೆರಡು ವಸಂತಗಳನ್ನು ಕಂಡಿರುವ 'ಅಚಲ'ಗೆ ಈ ದೀರ್ಘ ಅವಧಿಯಲ್ಲಿ ಆರ್ಥಿಕ ಬೆನ್ನೆಲುಬಾದವರು ಚಂದಾದಾರರು. ಅವರೊಂದಿಗೆ ಆರ್ಥಿಕ ನೆರವು ನೀಡಿದ ಕೆನರಾ ಬ್ಯಾಂಕಿನ ಗೆಳೆಯರಾದ ಸುರೇಂದ್ರ, ಶ್ರೀನಿವಾಸ್, ರಾಮಸುಧಾ ಟ್ರಸ್ಟ್‌ನ ಎ.ಎಚ್.ರಾಮರಾವ್, ಅನನ್ಯದ ಆರ್.ವಿ. ರಾಘವೇಂದ್ರ, ಕೆ.ಎಸ್. ಪಾರ್ಥಸಾರಥಿ, ಜಿ. ಶ್ರೀನಿವಾಸರಾಜು, ಮಾ-ಲೆ ಪ್ರಕಾಶನ ಮತ್ತು ನವಕರ್ನಾಟಕ ಪ್ರಕಾಶನ, ಸಾಹಿತ್ಯ ಅಕಾಡೆಮಿ, ವಾರ್ತಾ ಇಲಾಖೆ ಮುಂತಾದವರನ್ನೆಲ್ಲಾ ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಲೇಬೇಕು. ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಅಧ್ಯಕ್ಷರಾಗಿ ಕೆಲಸ ಮಾಡಿದ ಮಾರ್ಗರೆಟ್ ಬಿಸ್ವಾಸ್, ಲಕ್ಷ್ಮೀ ಚಂದ್ರಶೇಖರ್, ಕೆ.ಎಸ್.ವಿನೋದ, ಬಿ.ಎನ್.ಸುಮಿತ್ರಾಬಾಯಿ, ಹೇಮಲತಾ ಮಹಿಷಿ ಹಾಗೂ ಸಂಪಾದಕ ಗೆಳತಿಯರಾದ ಶಾಂತ ನಾಗರಾಜ್, ಹೆಚ್.ಎನ್. ಗೀತಾ ಅವರುಗಳ ಕ್ರಿಯಾಶೀಲತೆಯಿಂದಾಗಿಯೇ ಪತ್ರಿಕೆಯು ಇಷ್ಟು ದಿನ ಮುಂದುವರಿಯಲು ಸಾಧ್ಯವಾಗಿದೆ. ಈ ಪತ್ರಿಕೆಯನ್ನು ಮುದ್ರಿಸಿಕೊಟ್ಟ ಇಳಾ, ಜನಶಕ್ತಿ, ಲಿಪಿ ಮುದ್ರಣಾಲಯ, ಅಕ್ಷರ, ಮಾತೃ ಪ್ರಿಂಟರ್ಸ್‌ನ ಎಲ್ಲ ಬಂಧುಗಳಿಗೂ ನಮ್ಮ ನೆನಕೆಗಳು. ಅದರಲ್ಲೂ ವಿಶೇಷವಾಗಿ ಲಿಪಿ ಮುದ್ರಣದ ಬಾ.ಕಿ.ನ.ರವರ ಸ್ತ್ರೀಪರ ಕಾಳಜಿಗೆ ವಿಶೇಷ ನಮಸ್ಕಾರಗಳು.

ಜಾಗತೀಕರಣದ ಬಿರುಗಾಳಿಯಲ್ಲಿ ದುರ್ಬಲವಾಗುತ್ತಾ ಹೋದ ಸಾಮೂಹಿಕ ಚಳುವಳಿಗಳ ಜೊತೆಯಲ್ಲಿಯೇ ಮಹಿಳಾ ಚಳುವಳಿಯೂ ತನ್ನ ಬಿರುಸು ಮತ್ತು ಸ್ವರೂಪವನ್ನು ಬದಲಾಯಿಸಿಕೊಂಡದ್ದು ಅನಿವಾರ್ಯ ಅಗತ್ಯವಾಯಿತು. ಸಬಲೀಕರಣದ ಘೋಷಣೆಯೊಂದಿಗೆ ಆರ್ಥಿಕ ಕಾರ್ಯಕ್ರಮಗಳ ಮೇಲೆ ಬಿದ್ದ ಒತ್ತು ಚಳುವಳಿಯ ದಿಕ್ಕು, ದೆಸೆಗಳನ್ನು ಬದಲಾಯಿಸಿತು. ಈ ಕಾಲಘಟ್ಟದ ಸಮಾಜದ ನಿರೀಕ್ಷೆಗಳು ಮತ್ತು ಮಹಿಳಾ ಪ್ರಶ್ನೆಯ ಹೊಸ ವ್ಯಾಖ್ಯಾನಗಳು ಆತ್ಮ ವಿಮರ್ಶೆಗೆ ದಾರಿ ಮಾಡಿದ್ದಲ್ಲದೆ, ಚಳುವಳಿಯ ಸ್ವರೂಪ ಸಾಧ್ಯತೆಗಳನ್ನು ಪುನರ್ವಿಮರ್ಶಿಸಿಕೊಳ್ಳಲು ಒತ್ತಾಯಿಸುತ್ತಿದೆ. ಈ ಸಂದಿಗ್ಧ ಕಾಲದಲ್ಲಿ 'ಅಚಲ' ಪತ್ರಿಕೆ ತನ್ನ ಹಿಂದಿನ ಕಾರ್ಯಶೈಲಿಯಲ್ಲಿ ಮುಂದುವರಿಯುವುದು ಅಸಾಧ್ಯವಾಗಿದೆ; ಅನಗತ್ಯವೂ ಆಗಿದೆ. ಈ ಸಂದರ್ಭದಲ್ಲಿ ಗ್ರಾಮೀಣ ನೆಲೆಗಳಲ್ಲಿ ಹೆಚ್ಚು ಚಂದಾದಾರರನ್ನು ಮುಟ್ಟಲಾಗದ್ದರಿಂದ ಚಂದಾದಾರ ಬಳಗವನ್ನು ವಿಸ್ತರಿಸಿಕೊಳ್ಳುವಲ್ಲಿ ಪತ್ರಿಕೆ ಸೋತಿದೆ. ಯುವಜನಾಂಗದಲ್ಲಿ ಕ್ಷೀಣಿಸುತ್ತಿರುವ ಕನ್ನಡ ಓದುಗವರ್ಗ ಅಂಚೆ ಇಲಾಖೆಯ ವಿಚಿತ್ರ ರೀತಿ-ನಿಯಮಗಳು, ರಿಜಿಸ್ಟ್ರಾರ್ ಆಫ್ ನ್ಯೂಸ್‌ಪೇಪರ್ಸ್‌ನವರ ಬದಲಾಗುತ್ತಾ ಹೋಗುವ ನೀತಿ ಸಂಹಿತೆ – ಎಲ್ಲವೂ ಒಟ್ಟಾರೆಯಾಗಿ ಪತ್ರಿಕೆಯನ್ನು ಮುಂದುವರಿಸಬೇಕೆಂಬ ಉತ್ಸಾಹಕ್ಕೆ ತಣ್ಣೀರೆರಚುತ್ತಿವೆ. ಈ ಎಲ್ಲ ಅಡಚಣೆಗಳ ಮತ್ತು ಪ್ರತಿಕೂಲ ಪರಿಸ್ಥಿತಿಯಲ್ಲಿ 'ಅಚಲ' ತನ್ನ ಓದುಗರಿಗೆ ವಿದಾಯ ಹೇಳಬೇಕಾದ್ದು ಅನಿವಾರ್ಯವಾಗಿದೆ. ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವು ಪತ್ರಿಕೆಯನ್ನು ನಿಲ್ಲಿಸಿದರೂ ತನ್ನ ಉಳಿದ ಕಾರ್ಯಕ್ರಮಗಳನ್ನು ವಿಸ್ತರಿಸಿಕೊಳ್ಳುವ, ಚುರುಕುಗೊಳಿಸುವ ದಿಕ್ಕಿನಲ್ಲಿ ಕೆಲಸ ಮಾಡಲಿದೆ. ಈ ನಮ್ಮ ಪ್ರಯತ್ನಗಳಿಗೆ ನಿಮ್ಮೆಲ್ಲರ ಸಹಕಾರ ಬೆಂಬಲವನ್ನು ಎಂದಿನಂತೆ ನಿರೀಕ್ಷಿಸುತ್ತೇವೆ. ಈ ಪತ್ರಿಕೆಯೊಂದಿಗೆ ಸಂಬಂಧವಿರಿಸಿ ಕೊಂಡ ಎಲ್ಲ ಬಂಧುಗಳಿಗೂ ಕೊನೆಯದಾಗಿ ನಮ್ಮ ನಮಸ್ಕಾರ.

**– ಎನ್. ಗಾಯತ್ರಿ**

# ಸಾಮಾಜಿಕ ಕಳಕಳಿಯ ಲೇಖಕಿ- ಅಸ್ಮಾ ನಾಡಿಯಾ

• ನೇಮಿಚಂದ್ರ

ಕಳೆದ ಅಕ್ಟೋಬರ್ ತಿಂಗಳು, ಕೊರಿಯಾದ ಗ್ವಾಂಜು ಪಟ್ಟಣದ 'ರೈಟರ್ಸ್ ಅಸೋಸಿಯೇಷನ್ ಫಾರ್ ನ್ಯಾಷನಲ್ ಲಿಟರೇಚರ್'ನಿಂದ ನನಗೆ ಆಹ್ವಾನ ಬಂದಿತ್ತು. ಚಾರಿತ್ರಿಕ ಗ್ವಾಂಜು ನಗರದಲ್ಲಿ ನಡೆಯಲಿದ್ದ 'ಎರಡನೇ ಏಷಿಯಾ ಲಿಟರೇಚರ್ ಫೋರಮ್'ನಲ್ಲಿ 'ಲಿಟರೇಚರ್ ಇನ್ ಟೈಮ್ಸ್ ಆಫ್ ಟೆರರ್' ಕುರಿತು ಭಾಷಣ ಮಾಡಲು ಬಂದ ಆಹ್ವಾನವದು.

ಕೊರಿಯಾದಲ್ಲಿ ಕಳೆದ ಈ ಸಮಯದಲ್ಲಿ ನನಗೆ ಪರಿಚಯವಾದವರು ಇಂಡೋನೇಷಿಯಾದ ಲೇಖಕಿ ಅಸ್ಮಾ ನಾಡಿಯಾ. ಸಾಮಾಜಿಕ ಕಳಕಳಿಯ ಈ ಎಳೆಯ ಲೇಖಕಿ ಕೊಳಚೆ ಪ್ರದೇಶದ ಮಕ್ಕಳಲ್ಲಿ ಕಲಿಯುವ ಆಸಕ್ತಿಯನ್ನು, ಓದುವ ಹವ್ಯಾಸವನ್ನು ಬೆಳೆಸಲು ಶ್ರಮಿಸುತ್ತಿದ್ದಾರೆ. ಇಂಡೋನೇಶಿಯಾದ ನೂರೊಂದು ದ್ವೀಪಗಳಿಗೆ ಸದಾ ತಿರುಗಾಡುತ್ತಾ, ಹೆಣ್ಣು ಮಕ್ಕಳಿಗೆ ತಮ್ಮ ಮನದ ಭಾವನೆಗಳನ್ನು ಅಭಿವ್ಯಕ್ತಿಸಲು 'ರೈಟರ್ಸ್ ವರ್ಕ್‌ಶಾಪ್' ನಡೆಸಿಕೊಡುತ್ತಾರೆ.

ಅಸ್ಮಾ ಸಣ್ಣ ಪ್ರಕಾಶನ ಸಂಸ್ಥೆಯ ಮುಖ್ಯಾಧಿಕಾರಿ. ಎಳೆಯ ವಯಸ್ಸಿನಲ್ಲಿ ತಲೆಗೆ ಪೆಟ್ಟಾಗಿ ಸರಿಯಾದ ತಪಾಸಣೆಯಾಗದೆ ಉಳಿದ ಕಾರಣ ಅಸ್ಮಾಗೆ ಕೆಲವೊಮ್ಮೆ ಎಲ್ಲಿಲ್ಲದ ತಲೆ ನೋವು ಬರುತ್ತದೆ. ರಾತ್ರಿ ನಿದ್ರೆ ಕಷ್ಟವಾಗುತ್ತದೆ. 'ನಾನು ಯಾವಾಗಾದರೂ ನಿದ್ರಿಸುತ್ತಿದ್ದರೆ, ನನ್ನ ಗಂಡ ಮಕ್ಕಳು ಯಾರೂ ತೊಂದರೆ ಕೊಡುವುದಿಲ್ಲ. ಅಮ್ಮನಿಗೆ ನಿದ್ರೆ ಬರುವುದು ಕಷ್ಟ ; ತೊಂದರೆ ಕೊಡಬಾರದು ಎಂದು ಜಾಗರೂಕತೆ ವಹಿಸುತ್ತಾರೆ' ಆಕೆ ಹೇಳಿದ್ದರು. ಆಗಾಗ್ಗೆ ಕಾಡುವ ತಮ್ಮ ತೀವ್ರ ತಲೆನೋವನ್ನೂ ಲೆಕ್ಕಿಸದೆ ಅಸ್ಮಾ ತಮ್ಮ ಕೆಲಸದಲ್ಲಿ, ಬರಹದಲ್ಲಿ ತೊಡಗುತ್ತಾರೆ. ಕಳೆದ ಐದು ವರ್ಷಗಳಲ್ಲಿ ಈಕೆ 30 ಪುಸ್ತಕಗಳನ್ನು ಬರೆದಿದ್ದಾಳೆ. ಹಗುರವಾದ ನಲ್ಲಾವ್ಯಗಳಲ್ಲ, ಸಾಮಾಜಿಕ ಕಳಕಳಿಯ, ವೈಚಾರಿಕ ಪುಸ್ತಕಗಳು ಅವು.

ಅತ್ಯಂತ ಬಡವರಿಗಾಗಿ ಕೊಳಚೆ ಪ್ರದೇಶದಲ್ಲಿ ಅಸ್ಮಾ ಒಂದು ಗ್ರಂಥಾಲಯ ತೆರೆದರು. ಅದರ ಹೆಸರು 'ಪಂಚಾರಿಗನ್'. ಇಲ್ಲಿ ಮಕ್ಕಳಿಗೆ, ಕಿಶೋರ ವಯಸ್ಸಿನ ಯುವಕ ಯುವತಿಯರಿಗೆ ತೆರೆದ ಬಾಗಿಲು. ಅಕ್ಕನೊಡನೆ ಅಸ್ಮಾ ಸ್ಥಾಪಿಸಿದ ಮತ್ತೊಂದು ಸಂಸ್ಥೆ 'ಪರುಮ್ ಲಿಂಗರ್‌ಪೆನ್', ಅದರ ಅರ್ಥ 'ಜಾಗತಿಕ ಲೆಕ್ಕಣಿ' ಎಂದು. ಎಳೆಯ ಬರಹಗಾರರಿಗೆ ಮಾರ್ಗದರ್ಶನ ಮಾಡುವ ಉದ್ದೇಶದ ಈ ಸಂಸ್ಥೆಗೆ 60 ದಾಟಿದ ಮಹಿಳೆ ಕೂಡ ಬಂದದ್ದಿದೆ. 5000ಕ್ಕೂ ಹೆಚ್ಚು ಸದಸ್ಯರಿರುವ ಈ ಸಂಸ್ಥೆಯಲ್ಲಿ ಹೆಚ್ಚು ಮಹಿಳೆಯರಿದ್ದಾರೆ. ಪುಸ್ತಕ ಓದುವಲ್ಲಿ, ಬರೆಯುವಲ್ಲಿ ಆಸಕ್ತಿ ತೋರಿದವರಿಗೆಲ್ಲ ತೆರೆದ ಬಾಗಿಲು. ಅಸ್ಮಾ ಮತ್ತು ಅಕ್ಕ, ದೇಶದ ಉದ್ದಗಲಕ್ಕೆ ಪ್ರಯಾಣ ಮಾಡಿ, ಬರವಣಿಗೆಯ ಕಾರ್ಯಾಗಾರಗಳನ್ನು ಎಳೆಯ ಹುಡುಗ ಹುಡುಗಿಯರಿಗೆ ಪುಕ್ಕಟ್ಟೆಯಾಗಿ ನಡೆಸಿಕೊಡುತ್ತಾರೆ.

ಈ ಲೇಖಕಿಯ 'ಅಮ್ಮನ ಕಣ್ಣಿನ ಚಂದ್ರ' ಎಂಬ ಕತೆಯನ್ನು ಎಚ್.ಎನ್. ಗೀತಾ ಅವರು ಇಲ್ಲಿ ಅನುವಾದಿಸಿದ್ದಾರೆ.

## ಅಮ್ಮನ ಕಣ್ಣಿನ ಚಂದ್ರ

ಮೂಲ:ಅಸ್ಮಾ ನಾಡಿಯಾ

ಅನುವಾದ:ಹೆಚ್.ಎನ್.ಗೀತಾ

ಆಗ ತಾನೆ ಓದಿದ್ದ ಟೆಲಿಗ್ರಾಮನ್ನೇ ನಾನು ದಿಟ್ಟಿಸಿ ನೋಡಿದೆ. ಅದು ನನ್ನನ್ನು ತುಸು ಕಳವಳಕ್ಕೀಡು ಮಾಡಿತ್ತು.

*ಅಮ್ಮನಿಗೆ ಹುಶಾರಿಲ್ಲ. ದಿಯಾ ಮನೆಗೆ ಬಾ.*

ಅದರಲ್ಲಿ ಇದ್ದುದು ಅಷ್ಟೇ. ಶ್ರೀ ಅಕ್ಕ ನನ್ನನ್ನು ಮನೆಗೆ ಬರಬೇಕು ಎಂದು ಕರೆಯುತ್ತಿದ್ದಾಳೆಯೇ? ಅಂದರೆ.... ಅಮ್ಮನಿಗೆ ನಿಜಕ್ಕೂ ಹುಷಾರಿಲ್ಲವೇ?

ಯಾವಾಗಲೂ ದೃಢಕಾಯವಾಗಿದ್ದ ಅಮ್ಮನ ಚಿತ್ರ ಮನಸ್ಸಿನಲ್ಲ ಒಮ್ಮೆಲೆ ಮೂಡಿತು. ಅವಳು ನಮ್ಮ ದನಕರುಗಳನ್ನು ಮೇಯಿಸುತ್ತಾ, ಒಂಟಿಯಾಗಿ ವಿಶಾಲವಾದ ಗೋಮಾಳದಲ್ಲಿ ಗಂಟೆಗಟ್ಟಳೆ ಅಲೆದಾಡುತ್ತಿದ್ದುದನ್ನು ನಾನು ನೋಡಿದ್ದು ಇನ್ನೂ ನಿನ್ನೆಮೊನ್ನೆ ಎಂಬಂತೆ ನನಗೆ ಭಾಸ. ಬೆಟ್ಟದ ಹಿಂದಿನಿಂದ ಒಂದು ಚುಕ್ಕಿಯಂತೆ ಕಾಣುತ್ತಿದ್ದ ನಮ್ಮ ಚಿಕ್ಕ ಮನೆಯಿಂದ ನಾನು ಗಮನಿಸುತ್ತಿದ್ದೆ. ಇಲ್ಲ. ದಿನದ ಕೊನೆಯಲ್ಲಿ, ಅಮ್ಮನ ದೈಹಿಕ ಶಕ್ತಿಯನ್ನು ಕುಂದಿಸುತ್ತಿದ್ದ ಎಲ್ಲ ಚಟುವಟಿಕೆಗಳು ಮುಗಿದ ಮೇಲೂ ಅವಮ್ಮ ಸುಸ್ತಾದವಳಂತೆ ಕಾಣುತ್ತಿರಲಿಲ್ಲ. ಅಮ್ಮ ಯಾವಾಗಲೂ ಸಶಕ್ತಳಾಗಿಯೇ ಕಂಡಿದ್ದಳು.

ಸಶಕ್ತಳಷ್ಟೇ ಅಲ್ಲ, ಅವಳ ಬಾಯಿಂದ ಯಾವಾಗಲೂ ಚುಚ್ಚು ಟೀಕೆಗಳೇ ಬರುತ್ತಿದ್ದವು. ಅದೂ ನನ್ನತ್ತಲೇ ಗುರಿಯಿಟ್ಟು.

"ಹುಡುಗೀರು ಹಗಲುಕನಸು ಕಾಣುತ್ತಾ ಕಾಲ ವ್ಯರ್ಥ ಮಾಡಬಾರದು, ದಿಯಾ! ಕೆಲಸ ಕಣೇ, ಹುಡುಗಿ, ದೇಹಾನ ದೃಢವಾಗಿಸೋದು ಕೆಲಸ ಕಣೇ!" ಇದು, ಒಂದು ದಿನ ನಾನು ಸುಮ್ಮನೆ ಕುಳಿತಿರಲಿಲ್ಲವಾದರೂ ಆಕೆ ನನ್ನ ಬಗ್ಗೆ ಮಾಡಿದ ಟೀಕೆಯಾಗಿತ್ತು. ಆಗ ನನ್ನ ತೊಡೆಯ ಮೇಲೊಂದು ಪುಸ್ತಕವಿತ್ತು. ಆದರೆ ಅಮ್ಮನಿಗೆ ಓದಿನ ಬಗ್ಗೆ ನನಗಿದ್ದ ಪ್ರೀತಿ ಮೆಚ್ಚುಗೆ ಆಗುತ್ತಲೇ ಇರಲಿಲ್ಲ. ಅವಳ ದೃಷ್ಟಿಯಲ್ಲಿ, ಓದುವುದು ಒಂದು ವ್ಯರ್ಥ, ನಿಷ್ಪ್ರಯೋಜಕ ಚಟುವಟಿಕೆ. ಮತ್ತೊಮ್ಮೆ ನಾನು ನಮ್ಮ ಹಳ್ಳಿಯ ಕೆಲ

ಹುಡುಗರನ್ನು ಭೇಟಿ ಆಗಿದ್ದಕ್ಕೆ ಅಮ್ಮ ನನ್ನನ್ನು ಗದರಿಸಿದ್ದಳು. ನನ್ನ ಅವರ ಭೇಟಿಗೆ ಉದ್ದೇಶವಿಲ್ಲದೇ ಇರಲಿಲ್ಲ; ಆದರೆ ಅಮ್ಮ ಅದನ್ನು ಅರ್ಥ ಮಾಡಿಕೊಳ್ಳಲು ಹೋಗಲೇ ಇಲ್ಲ. ಅಲ್ಲಿ ಸೇರಿದ್ದ ಯುವಕರೆಲ್ಲ ಹಳ್ಳಿಯ ಒಳತಿಗಾಗಿ ತಂತಮ್ಮ ವಿಚಾರಗಳನ್ನು ಮುಂದಿಡುತ್ತಿದ್ದರು. ಆದರೆ ಈ ಸರಳ ಮಹಿಳೆಗಾದರೋ ಮಾತುಕತೆ ಚರ್ಚೆಗಿಂತ ದನಕರುಗಳನ್ನು ಮೇಯಿಸುವುದೇ ಹೆಚ್ಚು ಪ್ರಯೋಜನಕಾರಿಯಾಗಿತ್ತು.

"ಮಾತುಕತೆಯಿಂದ ಹಣ ಗಳಿಸಬಹುದೆಂದು ನಿನಗೆ ಅನ್ನಿಸುತ್ತದೆಯೇನು?"

ಹೌದೆಂದು ತಲೆಯಾಡಿಸಿ, ತಿರಸ್ಕಾರ ತುಂಬಿದ ಅವಳ ಕಣ್ಣುಗಳನ್ನು ದಿಟ್ಟಿಸಿ ಪ್ರತಿಭಟಿಸಲು ನಾನು ಎಷ್ಟೊಂದು ಬಯಸಿದ್ದೆ.

ನಿನಗೆ ಗೊತ್ತಿಲ್ಲವೇನಮ್ಮ, ನಗರಗಳಲ್ಲಿ ಬಹಳಷ್ಟು ಕೆಲಸಗಳಿಗೆ ಮಾತಿನ ಕೌಶಲ್ಯವಿರಬೇಕು. ಯಾವಾಗಲೂ ಗೋಮಾಳಗಳಲ್ಲಿ ದನಕರುಗಳಿಗೆ ಹುಲ್ಲು ಮೇಯಿಸುವುದರಲ್ಲೇ ತೊಡಗಿರುವುದನ್ನು ಬಿಟ್ಟು ಹಳ್ಳಿಯ ಮುಖ್ಯಸ್ಥರನ್ನು ಆಯ್ಕೆ ಮಾಡುವ ವಿಧಾನವನ್ನು ಅವಳು ನೋಡಿರಬೇಕಿತ್ತು. ನಮ್ಮ ಹಳ್ಳಿಯ ಮುಖ್ಯಸ್ಥನಿಗೆ ಮಾತನಾಡಿ, ಜನರ ಮನ ಒಲಿಸಿ ಗೆಲ್ಲುವ ಸಾಮರ್ಥ್ಯ ಇಲ್ಲದೇ ಹೋಗಿದ್ದರೆ ಅವನೆಂದೂ ಆಯ್ಕೆ ಆಗುತ್ತಲೇ ಇರಲಿಲ್ಲ! ಆದರೆ ನಾನು ಎಲ್ಲ ಮಾತುಗಳನ್ನೂ ನುಂಗಿ ಕೊಂಡೆನಷ್ಟೆ. ಒಂದೂ ಪದವನ್ನು ನಾನು ಆಕೆಯ ಮುಂದೆ ಒದರಲಾಗಲೇ ಇಲ್ಲ.

ಆಕೆಯ ಕಣ್ಣಿನಲ್ಲಿ ನನ್ನ ಉಡುಗೆ ತೊಡುಗೆ ಸಹ ಎಂದೂ ಚೆನ್ನಾಗಿ ಇರಲೇ ಇಲ್ಲ. ಯಾವಗಲೂ ಒಂದಲ್ಲ ಒಂದು ಪಿರಿಪಿರಿ. ಅದು ಚೊಕ್ಕಟವಾಗಿಲ್ಲ, ಹುಡುಗನಂತೆ ಕಾಣುತ್ತೇನೆ ಒಟ್ಟಿನಲ್ಲಿ ಹೀಗೇ ಏನೋ ಒಂದು.

ನನ್ನ ಮೂರು ಜನ ಅಕ್ಕಂದಿರು ಅದು ಹೇಗೆ ಅಮ್ಮನ ಯೋಚನಾ ಸರಪಣಿಯಿಂದ ಕಳಚಿಕೊಂಡರೋ, ನನಗೆ ನಿಲುಕದ ವಿಷಯವಾಗಿತ್ತು. ಅವರೂ ಶಾಲೆಗೆ ಹೋದರು, ಆದರೆ ಕಡೇಪಕ್ಷ ಮಿಡ್ಲ್ ಸ್ಕೂಲ್‌ವರೆಗೋ, ಹೈಸ್ಕೂಲ್ ವರೆಗೋ ಹೆಚ್ಚುಕಮ್ಮಿ ಅಮ್ಮನೊಂದಿಗೆ ಇಂತಹ ಚಿಲ್ಲರೆ ಜಗಳಗಳಿಲ್ಲ ದೆಯೇ ಹೋದರು. ಆಮೇಲೆ, ಡಿಗ್ರಿ, ಮದುವೆ, ಮಕ್ಕಳು... ಮತ್ತೆ ಅಮ್ಮನೊಂದಿಗೆ ಅಂತಹ ತಿಕ್ಕಾಟ ಗಳೇನೂ ಇಲ್ಲದೆಯೇ. ಆದರೆ ನಾನೋ..?

ಆಕೆ ಒಪ್ಪಿಕೊಂಡ ಯಾವುದನ್ನೂ ನಾನೂ ಎಂದಿಗೂ ಮಾಡಿಯೇ ಇಲ್ಲವೇನೋ ಎಂಬಂತಿತ್ತು. ಆಕೆಯ ಪಾಲಿಗೆ ನಾನೆಂದೂ ತಕ್ಕವಳಾಗಿ ಇರಲಿಲ್ಲ. ಒಮ್ಮೆ, ಬಹಳ ಹಿಂದೆ ನಾನು ಅವಳನ್ನು ಸಂತೋಷ ಪಡಿಸಲು ಯತ್ನಿಸಿದ್ದೆ. ಅಡಿಗೆಮನೆಯ ಕೆಲಸವೆಂದರೇನೇ ನನಗೆ ಆಗದು ಎಂಬುದು ನನ್ನ ಅಕ್ಕಂದಿರಿಗೆಲ್ಲ ಗೊತ್ತಿದ್ದರೂ, ಅಮ್ಮನಿಗಾಗಿ ನಾನು ಏನೋ ಅಡುಗೆ ಮಾಡಲು ಪ್ರಯತ್ನಿಸಿದ್ದೆ. ಕೊನೆಗೆ ಆದದ್ದೇನು? ಯಾಕಪ್ಪಾ ಮಾಡಿದೆ ಅಂತ ನನಗನ್ನಿಸಿತು, ಏಕೆಂದರೆ ಅಮ್ಮ ನನ್ನ ಪ್ರಯತ್ನದ ಬಗ್ಗೆ ಮೆಚ್ಚುಗೆಯನ್ನೂ ಸೂಸಲಿಲ್ಲ.

"ಹುಡುಗೀರು ಓದು, ಓದು ಅಂತ ಕೂತ್ರೆ ಆಗೋದು ಹೀಗೇಯಾ. ನಿನಗೆ ಅಡುಗೆ ಮಾಡೋದಕ್ಕೇ ಗೊತ್ತಿಲ್ಲ! ನೀನು ಹೀಗಿದ್ದರೆ ನಿನ್ನನ್ನು ಮದುವೆ ಮಾಡಿಕೊಳ್ಳಲು ಯಾರು ಬಯಸ್ತಾರೆ, ದಿಯಾ?"

ಆ ಕ್ಷಣದಲ್ಲಿ, ಅಮ್ಮನನ್ನು ಎದುರಿಸಲು ನಾನು ನನ್ನ ಅಸಹಾಯಕತೆಯಲ್ಲೇ ಮುಳುಗಿಹೋದೆ. ಕ್ರಮೇಣ, ನಾನು ಅವಳನ್ನು ತೃಪ್ತಿಪಡಿಸುವ ಪ್ರಯತ್ನವನ್ನೇ ನಿಲ್ಲಿಸಿಬಿಟ್ಟೆ.

ನನಗೂ ಸಾಕಾಗಿಹೋಗಿತ್ತು. ಆದ್ದರಿಂದಲೇ, ಮನೆ ಬಿಟ್ಟು ಹೋಗಿ, ಕಾಲೇಜಿನಲ್ಲಿ ಓದು ಮುಂದುವರಿಸುವ – ಅದೂ ಸ್ಕಾಲರ್‌ಶಿಪ್‌ನಲ್ಲಿ, ಅವಕಾಶ ಬಂದಾಗ, ಅದು ನನ್ನ ಕೈತಪ್ಪಿ ಹೋಗಬಾರದೆಂದು ನಾನು ಬಹಳಷ್ಟು ಶ್ರಮ ವಹಿಸಿದೆ.

ನಾನು ಹೋಗಲೇಬೇಕಾಗಿತ್ತು, ಅಮ್ಮನಿಂದ ದೂರ, ಅವಳ ಮನ ನೋಯಿಸುವ ಟೀಕೆಗಳಿಂದ ದೂರ.

ಸ್ಕಾಲರ್‌ಶಿಪ್ ಗಳಿಸಲು ಪರೀಕ್ಷೆಗಾಗಿ ನಾನು ಸಿದ್ಧತೆ ನಡೆಸುತ್ತಿದ್ದುದನ್ನು ಅವಳು ಕಂಡಾಗ ಅವಳಾಡಿದ ಹೀಯಾಳಿಕೆಯ ದನಿ ನನ್ನ ಕಿವಿಗಳಲ್ಲಿ ಇನ್ನೂ ಗುಂಯ್ ಗುಡುತ್ತಿದೆ.

"ನಿನಗೆ ಅದು ಸಿಗೋದಿಲ್ಲ, ದಿಯಾ! ತಲೆಯೇ ಕೆಡಿಸಿಕೊಳ್ಳಬೇಡ! ಹೆಂಗಸರು ಅಡುಗೆಮನೆಗೆ ವಾಪಸು ಬರಲೇಬೇಕು, ಅವರ ಸ್ಥಾನಮಾನ ಏನೇ ಆಗಿರಲಿ."

ಅವಳು ಅಂದದ್ದನ್ನು ನಾನು ಕಡೆಗಣಿಸಿದೆ. ಎಂದಿನಂತೆ ನನ್ನನ್ನು ನಾನು ತಡೆದುಕೊಳ್ಳಲು ಪ್ರಯತ್ನಿಸಿದೆ. ಕಡೇಪಕ್ಷ ಆ ಒಂದು ಸಮಯದವರೆಗೆ. ಆದರೆ ನನ್ನ ಆತ್ಮಸಂಯಮ ನೆಲಕಚ್ಚಿತು. ಮೊದಲನೆಯ ಸಲ ಅವಳ ಕಣ್ಣುಗಳನ್ನು ಎದುರಿಸುವ ಸಾಹಸ ನಾನು ಮಾಡಿದೆ. ತಿರಸ್ಕಾರಭರಿತ ಕಣ್ಣುಗಳನ್ನು, ಪ್ರೀತಿ ತುಂಬಿಲ್ಲ ಎಂದು ನನಗನ್ನಿಸಿದ್ದ ಕಣ್ಣುಗಳನ್ನು ಎದುರಿಸಿದೆ.

ಆ ಕ್ಷಣ ನನಗೆ ಖಚಿತವಾಗಿ ಹೋಯಿತು. ನಾನು ಅಮ್ಮ ಎಂದು ಕರೆಯುತ್ತಿದ್ದ ಆ ಮುದಿ ಹೆಂಗಸು ಈವರೆಗೂ ನನ್ನನ್ನು ಪ್ರೀತಿಸಿರಲೇ ಇಲ್ಲ . ಎಂದೂ ಪ್ರೀತಿಸುವುದೂ ಇಲ್ಲ ಎಂದು.

"ದಿಯಾ, ..ಹಗಲುಗನಸು ಕಾಣ್ತಿದೀಯೇನು?"

ಕೆನ್ನೆಯ ಮೇಲಿಂದ ನಾನು ಕಣ್ಣೀರನ್ನು ಒರೆಸಿಕೊಂಡೆ.

ಲೈಲಿ ನನ್ನ ದುಃಖದ ಮೂಡನ್ನು ಗ್ರಹಿಸಿದಳೆಂದು ಕಾಣುತ್ತದೆ, ಬಳಿಬಂದು ದಿಟ್ಟಿಸಿದಳು. ಅವಳ ದನಿಯಲ್ಲಿ

ಚಿಂತೆಯ ಲೇಪವಿತ್ತು. "ಏನಿದು? ನಿನ್ನ ಬರಹಗಳನ್ನು ಅವರು ಹಿಂತಿರುಗಿಸಿದರೆ? ಅದಂತೂ ಸಾಧ್ಯವಿಲ್ಲ", ನನ್ನಲ್ಲಿ ಸಂತೋಷ ತುಂಬಲು ಯತ್ನಿಸುತ್ತಾ ಅವಳು ಹೇಳಿದಳು.

ನಾನೂ ನಸುನಕ್ಕೆ, ಹೃದಯದ ಭಾರವನ್ನು ಇಳಿಸಲು ಯತ್ನಿಸುತ್ತಾ. ವಾಪಸು ಅವಳ ಕಂಗಳನ್ನೇ ನೋಡಿದೆ. ತಲೆಗೆ ಕಟ್ಟಿದ್ದ ಬೂದುಬಣ್ಣದ ಸ್ಕಾರ್ಫ್‌ನ ಮಧ್ಯದಿಂದ ಕಂಡುಬಂದ ನನ್ನ ಆಪ್ತ ಸ್ನೇಹಿತೆಯ ಮುಖದಲ್ಲಿ ನಿಷ್ಕಪಟಭಾವ ಎದ್ದು ಕಾಣುತ್ತಿತ್ತು.

ನಾನು ಗಂಟಲು ಸರಿಪಡಿಸಿಕೊಂಡು ಕೇಳಿದೆ –"ಲೀ, ತನ್ನ ಮಗುವನ್ನೇ ಪ್ರೀತಿಸದಿದ್ದ ಒಬ್ಬ ತಾಯಿ ಇದ್ದಳು ಎಂದರೆ ನೀನು ನಂಬುತ್ತೀಯಾ?"

ಲೈಲಿ ತಬ್ಬಿಬ್ಬಾಗಿ ನನ್ನನ್ನೇ ನೋಡಿದಳು. ಪ್ರಾಯಶಃ ಅವಳ ಕಿವಿಗಳಿಗೆ ವಿಚಿತ್ರವಾಗಿ ಈ ಪ್ರಶ್ನೆ ಕೇಳಿರಬೇಕು.. ಅಲ್ಲದೆ, ನಾನು ಭೇಟಿ ಮಾಡಿರುವ ಕುಟುಂಬಗಳಲ್ಲೇ ಅವಳ ಕುಟುಂಬ ಅತ್ಯಂತ ಪ್ರೇಮಮಯವಾದದ್ದೆಂದು ನನಗೆ ಗೊತ್ತಿತ್ತು. ಲೈಲಿಯ ತಾಯಿ ವಿವೇಕಿಯಷ್ಟೇ ಅಲ್ಲ, ಅವಳ ಮೇಲೆ ಪ್ರೀತಿ, ಪ್ರೇಮಗಳನ್ನೇ ಸುರಿಸುತ್ತಿದ್ದರು. ಅಮ್ಮನಿಗೆ ತದ್ವಿರುದ್ಧ!

"ದಿಯಾ, ಪ್ರೀತಿ ಎಂಬುದು ತಾಯಿಯಾದ ಒಡನೆಯೇ ತಂತಾನೆ ಮೂಡುವ ಒಂದು ಸಹಜಭಾವ. ಪ್ರತಿಯೊಬ್ಬ ತಾಯಿಗೂ ಅದು ಅಲ್ಲಾ ನೀಡುವ ಕೊಡುಗೆ. ಪ್ರೀತಿ, ಕಾಳಜಿ ಮತ್ತು ಕೋಮಲಭಾವ!" ಲೈಲಿ ಎಚ್ಚರಿಕೆಯಿಂದ ಹೇಳಿದಳು.

ಅವಳ ಕಣ್ಣುಗಳಿಂದ ದೃಷ್ಟಿ ಬೇರೆಡೆಗೆ ಹರಿಸಿದೆ. ನಾವಿಬ್ಬರೂ ಸುಮಾರು ಐದು ವರ್ಷಗಳಿಂದ ಒಂದೇ ಬಾಡಿಗೆ ಮನೆಯಲ್ಲಿ ವಾಸಿಸುತ್ತಿದ್ದೆವು. ನನ್ನ ಸಂತೋಷ ಗಳನ್ನು, ನನ್ನ ಕಷ್ಟಗಳೆಲ್ಲವನ್ನು ನಾನು ಅವಳಿಗೆ ಒಪ್ಪಿಸಿದ್ದೆ. ಆದರೆ ಅಮ್ಮನ ಬಗ್ಗೆ, ಅವಳು ನನ್ನನ್ನು ಹೇಗೆ ಅನ್ಯಾಯವಾಗಿ ನಡೆಸಿಕೊಂಡಳೆಂದು ಮಾತ್ರ ಎಂದೂ ಹೇಳಿರಲಿಲ್ಲ.

ಮತ್ತೆ ನಾನು ಕಣ್ಣೀರು ಹರಿಸತೊಡಗಿದೆ. ಈ ಐದು ವರ್ಷಗಳಲ್ಲಿ ಅವಳನ್ನು ನೋಡಲು ನಾನು ಮನೆಗೇ ಹೋಗಿರಲಿಲ್ಲ. ಒಮ್ಮೆಯೂ ಹೋಗಲಿಲ್ಲ! ನನ್ನ ಹೃದಯ ಬಾಯಾರಿದ್ದರೂ. ಏನೇ ಆಗಿದ್ದರೂ, ನನಗೆ ಜನ್ಮ ಕೊಟ್ಟ ತಾಯಿಗೆ ಕೊಡಲು ಒಬ್ಬ ಮಗಳಾಗಿ ನನ್ನಲ್ಲಿ ಪ್ರೀತಿಯಿತ್ತು. ದುರಾದೃಷ್ಟವೆಂದರೆ, ಅದನ್ನು ಅರಿತುಕೊಳ್ಳಲು ನನಗೆ ಅವಕಾಶವೇ ಇರಲಿಲ್ಲ. ನನ್ನ ಕಣ್ಣುಗಳಲ್ಲಿ ಪ್ರೀತಿಯ ಬೆಳಕನ್ನು ಅಮ್ಮ ಕಾಣಲೇ ಇಲ್ಲ, ಎಂದೂ ಒಂದು ಬಿಸಿಯಪ್ಪುಗೆಯಿಂದ ಅದನ್ನು ಹಿಂತಿರುಗಿಸಲಿಲ್ಲ. ಅವಳು ಎಂದೂ ಕೇರ್ ಮಾಡಲಿಲ್ಲ. ಇಷ್ಟು ವರ್ಷಗಳಲ್ಲಿ ಅವಳನ್ನು ಹೇಗೆ ತಾನೆ ನಾನು ದ್ವೇಷಿಸಲಾರಂಭಿಸದೇ ಇರಲು ಸಾಧ್ಯ?. ಆದರೆ ನಿಜ ಹೇಳಬೇಕೆಂದರೆ, ನನ್ನ ಜೀವನದಿಂದ ಅವಳ ಹೆಸರನ್ನು ತೊಡೆಯಲು ನಾನು ಆರಂಭಿಸಿಬಿಟ್ಟಿದ್ದೆ. ನಂತರದ ವರ್ಷಗಳಲ್ಲಿ ನನ್ನ ಅಕ್ಕಂದಿರಿಗೆ, ಅವರ ಮಕ್ಕಳಿಗೆ ಮಾತ್ರ ನಾನು ಪತ್ರಗಳನ್ನು, ಚಿತ್ರಗಳನ್ನು ಕಳಿಸುತ್ತಿದ್ದೆ. ಅಮ್ಮನಿಗೆ ಒಂದೂ ಇಲ್ಲ. ನನ್ನ ಲೇಖನಗಳಿಂದ ಗಳಿಸಿದ್ದರಲ್ಲಿ ಸ್ವಲ್ಪ ಹಣವನ್ನು ನಾನು ಅಮ್ಮನಿಗಾಗಿ ಮಾಮೂಲಾಗಿ ಎತ್ತಿಡುತ್ತಿದ್ದೆನಾದರೂ ನೇರವಾಗಿ ಅವಳಿಗೆ ಎಂದೂ ಕಳಿಸಲಿಲ್ಲ. ಯಾವಾಗಲೂ ಯಾರಾದರೊಬ್ಬ ಅಕ್ಕನ ಮೂಲಕವೇ. ಬಹಳಷ್ಟು ಸಲ ಅಕ್ಕ ಶ್ರೀಯ ಮೂಲಕವೇ.

ನನಗಿದ್ದ ತಾಯಿಯ ಪ್ರೀತಿಯ ಅಗತ್ಯವನ್ನು ನಾನು ನಿವಾರಿಸಲು ಕಲಿತುಕೊಂಡೆ. ಅವಳನ್ನು ಮರೆಯಲು... ನಾನು ಕಲಿತೆ.

"ದಿಯಾ....ನನ್ನನ್ನು ಹಾಗೇಕೆ ಕೇಳಿದೆ? " ಲೈಲಿಯ ದನಿ ಮತ್ತೆ ಕಿವಿಗೆ ಬಿತ್ತು. ನನ್ನ ಹೃದಯ ಬೆಚ್ಚಿಬಿತ್ತು. ತನ್ನ ಆತ್ಮೀಯ ಗೆಳತಿ ಇಲ್ಲಿಯವರೆಗೆ ತನ್ನ ತಾಯಿಯನ್ನೇ ಮರೆತಿದ್ದಳು ಎಂಬುದನ್ನು ತಿಳಿದಾಗ ಅವಳು ಏನೆಂದುಕೊಂಡಾಳು? ತಾಯಿಯನ್ನು ಗೌರವಿಸುವ ಮತ್ತು ಆಕೆಗೆ ಸೇವೆ ಮಾಡುವುದರ ಪಾವಿತ್ರ್ಯತೆಯನ್ನು ಇಸ್ಲಾಂ ಸ್ಪಷ್ಟವಾಗಿ ಹೇಳಿದೆ. ನನ್ನ ಎಲ್ಲಾ ಪ್ರಾರ್ಥನೆಗಳಲ್ಲಿ ನಾನು ಅವನಲ್ಲಿ ನನ್ನ ತಪ್ಪು ಒಪ್ಪಿಕೊಂಡಿದ್ದೇನೆ. ನಾನು ಅಮ್ಮನನ್ನು ಪ್ರೀತಿಸಲಿಲ್ಲ ಎಂದೇನಲ್ಲ. ಆದರೆ...ಅದು, ನಾನು ಅಮ್ಮನನ್ನು ಮರೆಯಬೇಕೆಂದು ಅವಳೇ ಬಯಸಿದಂತೆ!

"ನನ್ನ ಅಮ್ಮನಿಗೆ ಕಾಯಿಲೆ, ಲೀ! ನಾನೇನು ಮಾಡಬೇಕು? " ಕೊನೆಗೆ ನಾನು ಅಸಹಾಯಕಳಾಗಿ ಕೇಳಿದೆ.

ಲೈಲಿ ಮುಗುಳ್ನಕ್ಕಳು. ಅವಳ ಹಸ್ತ ನನ್ನ ಬೆರಳುಗಳನ್ನು ಹಿಡಿಯಿತು. "ಉಹ್, ಇದೇನೂ ಚಿಂತೆ ಮಾಡುವಂತ ಹುದಲ್ಲ! ಪ್ರಾಯಶಃ ನೀನಿಲ್ಲದಿರುವ ಕೊರಗಿರಬೇಕು. ಮನೆಗೆ ಹೋಗು, ಅವರನ್ನು ನೋಡಿ ಬಾ, ದೀ! ಅವರನ್ನು ಕಳೆದ ಬಾರಿ ನೀನು ನೋಡಿದ್ದು ಯಾವಾಗ ಹೇಳು? "

ನನ್ನ ಆಪ್ತ ಗೆಳತಿ ಕಾಲೇಜಿನ ರಜಾದಿನಗಳನ್ನು ನೆನಪಿಸಿಕೊಳ್ಳುತ್ತಿದ್ದಂತೆ ಕಂಡಿತು. ರಜಾದಿನಗಳಲ್ಲಾದರೋ ನಾನು ಮನೆಗೇ ಹೋಗುತ್ತಿರಲಿಲ್ಲ. ಬದಲಿಗೆ ನಾನು ಅವಳ ಜಾಗಕ್ಕೇ ಹೋಗಿದ್ದೆ ಅಥವಾ ಆ ಬಾಡಿಗೆಮನೆಯಲ್ಲೇ ರಜಾದಿನಗಳನ್ನೂ ಕಳೆದೆ.

"ನಾನು ಮನೆಗೇ ಹೋಗಿಲ್ಲ, ಲೈಲಿ. ಹೋಗದೆ ಆಗಲೇ ಐದು ವರ್ಷಗಳಾದವು. "

ನನ್ನ ಉತ್ತರ ಅವಳನ್ನು ತಬ್ಬಿಬ್ಬಾಗಿಸಿತು. ದಿಗ್ಭ್ರಮೆಗೊಳ್ಳಲು ಅವಳಿಗೆ ಎಲ್ಲಾ ಹಕ್ಕು ಇದ್ದವು. ಐದು ವರ್ಷಗಳೆನ್ನುವುದು ಕಡಿಮೆ ಅವಧಿಯೇನಲ್ಲ.

"ನೀನು ಈಗಿಂದೀಗಲೇ ಮನೆಗೆ ಹೋಗಬೇಕು, ದೀ! ನಿನಗಾಗಿ ರೈಲಿನ ಟಿಕೆಟ್ಟು ಬುಕ್ ಮಾಡುತ್ತೇನೆ. ಅಮ್ಮನಿಗಾಗಿ ಏನನ್ನಾದರೂ ಕೊಂಡುಕೊಳ್ಳಲು ಮರೆಯ ಬೇಡ.

ಮ್... ಅವಳಿಗೆ ಅತ್ಯಂತ ಇಷ್ಟವಾದ ತಿಂಡಿ ಯಾವುದು? "ಒಮ್ಮಿಂದೊಮ್ಮೆ ಲೈಲಿಗೆ ಏನೋ ಗಡಿಬಿಡಿ, ಗಾಬರಿ. ಐದು ವರ್ಷಗಳಿಂದ ತಾಯಿಯನ್ನು ಭೇಟಿ ಮಾಡಿರದಿದ್ದ ವಳು, ಈಗ ತನ್ನ ಸ್ವಂತ ತಾಯನ್ನು ನೋಡಲು ಹೋಗುತ್ತಿದ್ದುದು ಅವಳೇ ಏನೋ ಎಂಬಂತಿತ್ತು!

"ದಯವಿಟ್ಟು ನೀನೇನೂ ತೊಂದರೆ ತೆಗೆದುಕೊಳ್ಳಬೇಡ, ಲೈಲಿ! ಎಲ್ಲ ವ್ಯವಸ್ಥೆ ನಾನೇ ಮಾಡಿಕೊಳ್ಳಬಲ್ಲೆ! " ನಾನು ನಯವಾಗಿ ನಿರಾಕರಿಸಿದೆ. ಆದರೆ ಲೈಲಿ ಒತ್ತಾಯಿಸಿದಳು.

"ಹೇಯ್ ಬಿಡು..ಇದು ತೊಂದರೆಯೇನಲ್ಲ, ದೀ! ನಮ್ಮನ್ನೆಲ್ಲ ಭೇಟಿ ಮಾಡಲು ನೀನೇ ಯಾವಾಗಲೂ ತೊಂದರೆ ತೆಗೆದುಕೊಳ್ಳುತ್ತೀ. ಸೋ..ಈ ಬಾರಿ ನಿನ್ನ ಪ್ರಯಾಣಕ್ಕೆ ನಾನು ವ್ಯವಸ್ಥೆ ಮಾಡಲು ಬಿಡು. ಅಲ್ಲದೆ, ನ್ನಾ ಪೇಪರ್ ಪ್ರೆಸೆಂಟೇಷನ್ನಿಗೂ ನೀನು ತಯಾರಿ ಮಾಡಿಕೊಳ್ಳಬೇಕು. ಸರಿ ತಾನೆ? "

ನಾನು ಮನಸ್ಸು ಸಡಿಲಿಸಿದೆ.

ಲೈಲಿ ಹೊರಡುವ ಮುಂಚೆ ಮತ್ತೊಮ್ಮೆ ಅವಳನ್ನು ನೋಡಿದೆ. ""ನಾನು ಮನೆಗೆ ಹೋಗಬೇಕೆಂದು ನಿನಗೆ ಖಚಿತವಾಗಿ ಅನ್ನಿಸುತ್ತದೆಯೇ, ಲೀ? "

ನನ್ನ ಪ್ರಶ್ನೆಯನ್ನು ಅವಳು ಹಾರ್ದಿಕವಾಗಿ ನಕ್ಕಳು. "ನಿಸ್ಸಂದೇಹವಾಗಿ ಮನೆಗೆ ಹೋಗು. ನಿನ್ನ ತಾಯಿ ನಿನಗಾಗಿ ಕೊರಗುತ್ತಿರಬಹುದು, ದಿಯಾ! "

ಆಹಾ..ನನ್ನ ಅಮ್ಮ ಎಂತಹವಳು ಎಂಬುದು ಲೈಲಿಗೆ ಏನಾದರೂ ಗೊತ್ತಿದ್ದಿದ್ದರೆ! ಅವಳು ಬಂಡೆಗಿಂತ ಕಠಿಣ, ಲೈಲಿ. ಒಂದು ಬಂಡೆಯನ್ನು ಸಹ ಸಮುದ್ರ ಕೊರೆದು ಬಿಡುತ್ತದೆ, ಆದರೆ ನನ್ನ ಅಮ್ಮ..?

ನಮ್ಮ ಪುಟ್ಟ ಮನೆ ಬಹಳವೇನೂ ಬದಲಾಗಿರಲಿಲ್ಲ. ಪಕ್ಕವೇ ಇದ್ದ ನನ್ನ ಅಕ್ಕಂದಿರು ಹಾಗೂ ಅವರ ಕುಟುಂಬಗಳು ನೆಲೆಸಿದ್ದ ಮನೆಗಳೂ ಅಷ್ಟೆ, ಏನೂ ಬದಲಾಗಿರಲಿಲ್ಲ. ನಾನು ಒಳಪ್ರವೇಶಿಸಿದಾಗ, ಕೋಣೆಯು ಎಂದಿನಷ್ಟು ಚೊಕ್ಕಟವಾಗಿಲ್ಲದಿರುವುದನ್ನು ನಾನು ನೋಡಿದೆ. ಅದಕ್ಕೆ ಪ್ರಾಯಶಃ ಅಮ್ಮನ ಸ್ಪರ್ಶ ಕಳೆದುಹೋಗಿತ್ತು. ಕಳೆದ ವರ್ಷ ಒಂದೆರಡು ಬಾರಿ ಅಮ್ಮ ಕಾಯಿಲೆ ಬಿದ್ದಿದ್ದನ್ನು ಅಕ್ಕ ಶ್ರೀ ಹೇಳಿದಳು. ಆದರೆ ಆ ಬಗ್ಗೆ ಅವರು ನನಗೆ ತಿಳಿಸಲು ಅಮ್ಮ ಬಿಡಲಿಲ್ಲವಂತೆ. ಏಕೆಂದರೆ ಅಮ್ಮನಿಗೆ ಇಲ್ಲಿ ನನ್ನ ಅಗತ್ಯವಿಲ್ಲವಲ್ಲ, ನನಗೆ ನಾನೇ ಉಸುರಿಕೊಂಡೆ.

ನನ್ನ ಚಡಪಡಿಕೆಯನ್ನು ಗಮನಿಸಿದ ಅಕ್ಕ ನಿಂಗ್ಲೀ "ಅಮ್ಮ ನಿನ್ನ ಓದಿಗೆ ಅಡ್ಡಿ ಪಡಿಸಲು ಬಯಸಲಿಲ್ಲ, " ದಿಯಾ ಎಂಬ ವಿವರಣೆ ಕೊಟ್ಟಳು. ಅವಳ ಎರಡು ಮಕ್ಕಳು ಅವಳ ತೊಡೆಯಲ್ಲಿ ಅಂಟಿಕೊಂಡು ಕುಳಿತಿದ್ದವು.

ಅಕ್ಕನ ಮಾತು ಕೇಳಿ ನನ್ನ ಮುಗುಳ್ನಗುವಿನಲ್ಲಿ ತಿರಸ್ಕಾರ ಬೆರೆತಿತು. ನನ್ನ ಓದಿನ ಬಗ್ಗೆ ಅಮ್ಮ ಯಾವಾಗ ತಾನೆ ಚಿಂತೆ ಮಾಡಿದ್ದಳು? ಅವಳ ಯೋಚನೆಗಳ ಪ್ರಕಾರ, ಹುಡುಗಿಯರ ಸ್ಥಾನ ಅಡುಗೆಮನೆಯೇ ಅಲ್ಲವೇ?

ಸಾಮಾನ್ಯವಾಗಿ ಹೆಚ್ಚು ಮಾತಾಡದ ಅಕ್ಕ ರಹಾಯು "ಅಮ್ಮ ಆಗಾಗ್ಗೆ ನಿನ್ನ ಬಗ್ಗೆ ಕೇಳುತ್ತಿದ್ದಳು, ಆಗಿಂದಾಗ್ಗೆ. ಈಗ ನೀನು ಯಾವ ವರ್ಷದಲ್ಲಿದ್ದೀ? ನಿನ್ನ ಓದು ಮುಗಿಯುವುದು ಯಾವಾಗ? "

"ನಿಜ ಹೇಳಬೇಕೆಂದರೆ, ಅಮ್ಮನಿಗೆ ನಿನ್ನ ಅಗಲಿಕೆಯದೇ ಕೊರಗು, ದಿಯಾ. ಆದರೆ ಅವಳಿಗೆ ನಿನ್ನ ಓದೇ ಮೊದಲು", ಮಗುವಿಗೆ ಹಾಲುಣಿಸುತ್ತ ಅಕ್ಕ ಶ್ರೀ ತನ್ನ ಮಾತು ಸೇರಿಸಿದಳು.

ನನಗೆ ಯಾವ ರೀತಿಯ ಓಲೈಕೆಯೂ ಬೇಕಾಗಿರಲಿಲ್ಲ. ಅಮ್ಮ ಏನೆಂದು ನಾನು ಬಲ್ಲೆ. ಇಷ್ಟು ವರ್ಷಗಳ ಆಕೆಯ ಮಗಳಾಗಿ, ಆಕೆ ನನ್ನೊಂದಿಗೆ ಎಂದೂ ಪ್ರಿಯವಾಗಿ ನಡೆದುಕೊಂಡಿರಲಿಲ್ಲ. ಒಮ್ಮೆಯೂ ಇಲ್ಲ. ಅಕ್ಕ ಏನನ್ನು ಹೇಳಿದಳೋ ಅದು ಸುಮ್ಮನೆ ನನ್ನನ್ನು ಸಂತೋಷ ಪಡಿಸಲಿಕ್ಕಾಗಿ. ಇಲ್ಲಿಗೆ ಬಂದು ಸಮಯ ವ್ಯರ್ಥವಾಯಿತು ಎಂದು ನನಗನ್ನಿಸಬಾರದಲ್ಲಾ, ಅದಕ್ಕೆ. ಅವರು, ಐದು ವರ್ಷಗಳ ಹಿಂದಿನ ಆ ಘಟನೆ, ಅಮ್ಮನೊಂದಿಗೆ ನಡೆದ ನನ್ನ ಆ ದೊಡ್ಡ ಜಗಳವನ್ನು ಮರೆತಿಲ್ಲ ಎಂಬುದು ನನಗೆ ಗೊತ್ತಿತ್ತು. ಮನೆ ತೊರೆಯುವ ನನ್ನ ನಿರ್ಧಾರವನ್ನು ದೃಢೀಕರಿಸಿತ್ತು ಆ ಜಗಳ. ಆ ರಾತ್ರಿ ಅಮ್ಮ ನನ್ನನ್ನು ದ್ವೇಷಪೂರಿತ ಪದಗಳಿಂದ ಬೈದದ್ದೂ ಬೈದದ್ದೇ. ಅವಳಿಗೆ ಇದ್ದುದ್ದು ಒಂದೇ ಗುರಿ – ನಾನು ಹೋಗುವುದನ್ನು ತಡೆಯಬೇಕು. ನನ್ನ ಪಾಲಿಗೆ ಅವಳು ಬಹಳ ಸ್ವಾರ್ಥಿ ಮತ್ತು ಬಾಲಿಶ. ತಮ್ಮ ಮಗುವಿಗೆ ಸ್ಕಾಲರ್‌ಶಿಪ್ ಬಂದಿದೆ ಎಂದು ಕೇಳಿದ ಇತರ ಪಾಲಕರು ಸಂತೋಷಪಟ್ಟರೆ ಇವಳು ಅದಕ್ಕೆ ವಿರುದ್ಧ. ಈ ಸ್ಕಾಲರ್‌ಶಿಪ್ಪು ಪಡೆಯಬೇಕೆಂದರೆ ನಾನು ಸಾವಿರಾರು ಜನರನ್ನು ಸೋಲಿಸಬೇಕೆಂಬುದು ಇವಳಿಗೆ ಗೊತ್ತಿಲ್ಲವೇ?

ಅವಳ ದನಿಯನ್ನು ಅಡಗಿಸಲು ನಾನು ಯತ್ನಿಸಿದ್ದೆ. ಆದರೆ ಅವಳ ದ್ವೇಷ ತುಂಬಿದ ಪದಗಳು ಕಮ್ಮಿಯಾಗಲಿಲ್ಲ. ಬದಲಿಗೆ, ಅವು ಇನ್ನೂ ಇನ್ನೂ ಕಠೋರ ವಾಗತೊಡಗಿದ್ದವು.

"ನಿನ್ನಂತಹ ಹುಡುಗಿ ನಗರಕ್ಕೆ ಹೋಗುವುದು ಎಂದರೆ, ದಿಯಾ, ನೀನು ಗಂಡಸರಿಗೆ ಆಹಾರವಾಗಿಬಿಡುತ್ತೀ! ನೀನು ಕ್ಷೇಮವಾಗಿ ಇರಬಹುದಾದ ಜಾಗವೆಂದರೆ ನಿನ್ನದೇ ಆದ ಈ ಹಳ್ಳಿ. ಈ ಕುಟುಂಬಕ್ಕೆ ನೀನು ಕಳಂಕ ತರುವುದು ನನಗೆ ಬೇಕಾಗಿಲ್ಲ. ಅವಮಾನ ಹೊಂದಿ ಮನೆಗೆ ಬರುವುದು!"

ಅಸಗ್‌ಫಿರುಲ್ಲಾ...ದೇವರು ಕ್ಷಮಿಸಲಿ...ನಾನು ಎಂತಹ ಹುಡುಗಿ ಎಂದು ಇವಳು ತಿಳಿದಿದ್ದಾಳೆ? ವಾದ ಮಾಡಲು ನಾನು ಬಾಯನ್ನು ಅರೆತೆರೆದಿದ್ದೆ, ಆದರೆ ನನ್ನ ಮೂರೂ ಜನ ಅಕ್ಕಂದಿರು ನನ್ನನ್ನು ತಡೆಹಿಡಿದರು. ನನ್ನ ವಿರೋಧವನ್ನು ನೋಡಿದ ಅಮ್ಮನ ಕೋಪಕ್ಕೆ ತಡೆಯೇ ಇರಲಿಲ್ಲ.

"ನನ್ನ ಜೊತೆ ವಾದ ಮಾಡಲು ಯತ್ನಿಸಬೇಡ! ರೆಶ್ಮಾ ಚೆನ್ನಾಗಿಲ್ಲವೆಂದೋ. ಓದಿದವಳಲ್ಲವೆಂದೋ ಯಾರು ತಾನೆ ಹೇಳ್ತಾ ಇರಲಿಲ್ಲ? ಮತ್ತೆ ಸುಮಿರಾ..? ಅವಳು..ಆ ಹಾಜಿ ತಾರ್ಜೋ ಮಗಳು ಕೂಡ..? ಅವರೆಲ್ಲ ಮನೆಗೆ ಬಂದ ಸೂಳೆಯರು! ಮಗಳು ಸೂಳೆಯಾಗುವುದು ನನಗೆ ಬೇಡ!"

ಸಾಕಾಯ್ತು! ಇನ್ನು ತಡೆದುಕೊಳ್ಳುವುದು ನನಗಾಗಲಿಲ್ಲ. ಅವಳ ಮಾತುಗಳನ್ನು ಸುಮ್ಮನೆ ಕೇಳುತ್ತಾ ಕೇಳುತ್ತಾ ನನ್ನ ರಕ್ತ ಕುದಿಯಲಾರಂಭಿಸಿತು. ನನ್ನನ್ನು ಅರಿಯಲು ಅವಳು ಸ್ವಲ್ಪ ಸಮಯ ತೆಗೆದುಕೊಂಡಿದ್ದರೆ, ಅವಳ ಸ್ವಂತ ಮಗಳಲ್ಲಿ ಅವಳಿಗೆ ಸ್ವಲ್ಪವಾದರೂ ನಂಬಿಕೆ-ವಿಶ್ವಾಸಗಳಿದ್ದಿದ್ದರೆ!? ಅವಳು ನಂಬಿದ್ದ ಏಕೈಕ ವ್ಯಕ್ತಿಯೆಂದರೆ ಅವಳೇ.ಬೇರೆ ಯಾರಾದರೂ ಆಗಿದ್ದರೂ, ಅವರಿಗೆ ಗ್ರಹಚಾರ ಕಾದಿರುತ್ತಿತ್ತು, ಅಷ್ಟೆ.

ಅಪ್ಪ ನಮ್ಮನ್ನೆಲ್ಲಾ ತೊರೆದುಹೋದ ರೀತಿ! ಹೌದು, ಅಪ್ಪ ನಮ್ಮನ್ನು ತ್ಯಜಿಸಿದರು. ನಮ್ಮ ಜೀವನಗಳಲ್ಲಿ ಬದಲಾವಣೆ ತರಲು ನಗರದಿಂದ ಹಿಂತಿರುಗಿ ಬರುತ್ತೇನೆಂದು, ಅಪ್ಪ ಆಣೆ ಮಾಡಿದ್ದರು. ಅದೆಲ್ಲ ಅರ್ಥವಿಲ್ಲದ್ದು. ಅಪ್ಪ ನಗರದಲ್ಲಿ ಮತ್ತೊಂದು ಮದುವೆ ಮಾಡಿಕೊಂಡಿದ್ದರು. ತಾನೊಂದು ಉತ್ತಮ ಹೆಂಗಸು ಎಂದು ತಿಳಿದುಕೊಂಡಿದ್ದ ಅಮ್ಮನ ಹೃದಯ ಒಡೆದಿತ್ತು. ಆಮೇಲೆ, ಉದ್ಧಾರ-ಪ್ರಗತಿ ಮುಂತಾದುವುಗಳಂತೆ ತೋರಿದ ಯಾವುದೇ ಇರಲಿ, ಅಮ್ಮನ ಶತ್ರುವಾಗುತ್ತಿತ್ತು. ನಗರದಲ್ಲಿ ನನ್ನ ಶಿಕ್ಷಣವೂ ಸೇರಿದಂತೆ.

ಅವಳನ್ನು ಪ್ರತಿಭಟಿಸುತ್ತಾ, ನಾನು ಅವಳ ಕಂಗಳನ್ನೇ ದಿಟ್ಟಿಸಿದೆ. ಅವಳೊಂದಿಗೆ ಮಾತನಾಡುವಾಗ ನನ್ನ ದನಿ ಅದುರಿತು. "ಅಮ್ಮ, ನೀನು ನನ್ನ ಬಗ್ಗೆ ಹೆಮ್ಮೆ ಪಡಬೇಕು! ನನ್ನನ್ನು ನೀನು ಪ್ರೋತ್ಸಾಹಿಸಬೇಕೇ ಹೊರತು ಅಣಕಿಸುವುದಲ್ಲ. ನನಗೆ ಈಗ ಗೊತ್ತು- ಅಪ್ಪ ನಿನ್ನನ್ನು ಏಕೆ ಬಿಟ್ಟರೆಂದು", ನಾನು ಧೈರ್ಯದಿಂದ ಹೇಳಿಬಿಟ್ಟೆ.

ನನ್ನೆದುರಿಗೆ ಇದ್ದ ಅಮ್ಮ ಪ್ರಶ್ನಿಸುವಂತೆ ನನ್ನನ್ನು ನೋಡಿದಳು. ನನ್ನ ಉದ್ಧಟತನಕ್ಕಾಗಿ ಅವಳ ಕಣ್ಣುಗಳಲ್ಲೇ ಕೋಪ ಕಾಣುತ್ತಿತ್ತು.

"ನಿನ್ನಪ್ಪ ಏಕೆ ಬಿಟ್ಟು ಹೋದ? ಏಕೆ ಎಂದು ನನಗೆ ಹೇಳು!!!"

ನನ್ನನ್ನು ತಡೆಯಲು ಅಕ್ಕ ಮಾಡಿದ ಯತ್ನ ವಿಫಲವಾಯಿತು. ಕೋಪದಲ್ಲಿ ನಾನು ಪ್ರಾಯಶಃ ಅಮ್ಮನ ಹೃದಯದಲ್ಲಿ ಎಂದಿಗೂ ಮಾಗದ ಗಾಯವನ್ನುಂಟು ಮಾಡಿದ್ದೆ.

"ಏಕೆಂದರೆ ನೀನು ಬಹಳ ಅಲ್ಪಳು. ಅದಕ್ಕೇನೆ! "

ನನ್ನ ಕೋಣೆಯ ಬಾಗಿಲನ್ನು ದಡಾರೆಂದು ಮುಚ್ಚಿದೆ ಹಾಗೂ ರಾತ್ರಿಯೆಲ್ಲಾ ಚಿಲಕ ಜಡಿದೇ ಇದ್ದೆ. ಅಳುತ್ತಿದ್ದೆ. ನನ್ನ ಬಗ್ಗೆ ನನಗೇ ಸಮಾಧಾನವಾಗಿತ್ತು. ಅಂತೂ ಅಮ್ಮ ಏನನ್ನು ಕೇಳಬೇಕೆಂದು ನಾನು ಬಯಸಿದ್ದೆನೋ ಅದನ್ನು ನಾನು ಹೇಳಿಬಿಟ್ಟಿದ್ದೆ.

ಮಾರನೆಯ ಮುಂಜಾನೆಯೇ ನಾನು ಅಕ್ಕಂದಿರಿಗೆಲ್ಲಾ ಬೈ ಬೈ ಹೇಳಿ ಹೃದಯದಲ್ಲೊಂದು ಗಾಯದ ತುಣುಕನ್ನಿಟ್ಟುಕೊಂಡು ಹೊರಬಿದ್ದೆ. ಪ್ರಾಯಶಃ ಮತ್ತೊಂದು ತುಣುಕು ಅಮ್ಮನ ಹೃದಯದಲ್ಲಿಯೂ. ಆದರೆ ಇನ್ನು ಮುಂದೆ ಅದ್ಯಾವುದೂ ನನಗೆ ಬೇಕಿರಲಿಲ್ಲ.

ನಾನು ಲೈಲಿ ಮತ್ತು ಇತರ ಮುಸ್ಲಿಂ ಗೆಳತಿಯರನ್ನು ಭೇಟಿಯಾದಾಗ, ನನ್ನ ಧೋರಣೆ ಬಗ್ಗೆ ವಿಷಾದಿಸಿದೆ. ಅಮ್ಮನೊಂದಿಗೆ ಅಷ್ಟು ಕಟುವಾಗಿ ನಡೆದುಕೊಳ್ಳಬಾರದಿತ್ತು. ಅವಳ ಕಟುತ್ವಕ್ಕೆ ಬದಲಾಗಿ ಅವಳದೇ ವರ್ತನೆಯನ್ನು ನಾನು ಹಿಂತಿರುಗಿಸಬಾರದಿತ್ತು.

ಹೀಗನ್ನಿಸಿದರೂ, ನನ್ನ ಪಶ್ಚಾತ್ತಾಪ ಅವಳ ಬಗ್ಗೆ ಈಗಾಗಲೇ ನನಗಿದ್ದ ಶೂನ್ಯಭಾವನೆಯನ್ನೇನೂ ಬದಲಾಯಿಸಲಿಲ್ಲ. ನನಗೆ ಜನ್ಮ ಕೊಟ್ಟ ಹೆಂಗಸನ್ನು ಇನ್ನೂ ನಾನು ಇಷ್ಟ ಪಡಲಿಲ್ಲ. ಅವಳು ನನ್ನನ್ನು ಇಷ್ಟ ಪಡದಿದ್ದಂತೆಯೇ.

"ದಿಯಾ...ಅಮ್ಮ ಎದ್ದಿದ್ದಾರೆ".

ಅಕ್ಕ ಶ್ರೀ ನನ್ನ ತೋಳು ಮುಟ್ಟಿದಳು, ನೆನಪುಗಳಿಂದ ನನ್ನನ್ನು ಈಚೆಗೆಳೆಯುತ್ತಾ.

ಅಮ್ಮನ ಕೋಣೆಯ ಬಾಗಿಲನ್ನು ನಾನು ತೆರೆದೆ. ತುಕ್ಕು ಹಿಡಿದಿದ್ದ ತಿರುಗಣೆಗಳು ಕಿರ್ರ್ ಎಂದವು. ಅಮ್ಮ ಕೃಶವಾಗಿ ಹಾಸಿಗೆಯ ಮೇಲೆ ಮಲಗಿದ್ದುದನ್ನು ನಾನು ನೋಡಿದೆ. ಈ ವರ್ಷಗಳಲ್ಲಿ ಶಕ್ತಿ ಎಂಬುದೇ ಅವಳಲ್ಲಿ ಉಳಿದಿಲ್ಲವೇನೋ ಎಂಬಂತೆ ನನಗೆ ಕಂಡಿತು. ಹತ್ತಿರ ಬಾರೆನ್ನುವಂತೆ ಅವಳ ತೆಳ್ಳಗಿನ ತೋಳುಗಳು ಆಡಿದವು.

ಲಾಟೀನಿನ ಬೆಳಕಿನಲ್ಲಿ ವಯಸ್ಸಿನ ಕುರುಹುಗಳಿದ್ದ ಅವಳ ಮುಖವನ್ನು ನಾನು ನೇವರಿಸಿದೆ. ಅಮ್ಮ ಎಷ್ಟು ವಯಸ್ಸಾದಂತೆ ಕಾಣುತ್ತಿದ್ದಳು.

"ಹೇಗಿದ್ದೀ ದಿಯಾ? " ಅಮ್ಮನ ದನಿಯಂತೂ ಪಿಸುಮಾತಿನಂತಿತ್ತು.

"ಚೆನ್ನಾಗಿದ್ದೇನಮ್ಮ. " ನನ್ನ ದನಿ ನಿರ್ವಿಕಾರವಾಗಿದೆ ಎಂಬುದು ನನಗೆ ಗೊತ್ತಾಯಿತು. ನನ್ನ

ಶೂನ್ಯಭಾವನೆಗಳನ್ನು ಅದು ಬಿಂಬಿಸಿತೋ ಏನೋ. ಅಮ್ಮ ಇಷ್ಟು ವರ್ಷಗಳ ನಂತರ ಈಗ ಮೊದಲ ಬಾರಿಗೆ ನನ್ನನ್ನು ನೋಡುತ್ತಿದ್ದಳು. ನಾನು ಈಗ ಹೇಗೆ ಕಾಣುತ್ತಿದ್ದೇನೆ ಎಂಬುದರ ಬಗ್ಗೆ ಅವಳಿಗೆ ಆಶ್ಚರ್ಯವಾದಂತೆ ಅನ್ನಿಸಲಿಲ್ಲ. ಅಥವಾ ನಾನು ಮುಸ್ಲಿಮರ ದಿರಿಸು ಧರಿಸಿದ್ದಕ್ಕೆ ಬೈಯಲೂ ಕೂಡ ಆಗದಷ್ಟು ಅವಳು ನಿತ್ರಾಣಳಾಗಿದ್ದಳೇ? ಮತ್ತೊಮ್ಮೆ ಸಿಡುಕಿನ ಆ ಟೀಕೆಗಳು ನನ್ನ ಮನಸ್ಸಿನಲ್ಲಿ ಹಾದು ಹೋದವು. ಏನೂ ಮಾಡಲಾಗದು.

"ಸಣ್ಣಗಾಗಿದ್ದೀಯಲ್ಲಾ, ಮಗಳೇ! " ನಮ್ಮೀರ್ವರ ತುಸುಹೊತ್ತಿನ ಮೌನದ ನಂತರ ಅಮ್ಮ ಹೇಳಿದಳು.

ನಾನೇನೂ ನುಡಿಯಲಿಲ್ಲ. ಬದಲಿಗೆ ಆ ಚಿಕ್ಕ ಕೋಣೆಯನ್ನೆಲ್ಲ ನನ್ನ ಕಣ್ಣುಗಳು ಅಲೆದಾಡಿದವು. ಮುಕ್ಕಾಲುವಾಸಿ ಏನೂ ಬದಲಾಗಿರಲಿಲ್ಲ. ಅಮ್ಮ ಏಕೆ ಈ ಬರಡು ಸರಳತೆಯಲ್ಲೇ ಉಳಿದಳು? ಅವಳಿಗೊಂದು ಸರಿಯಾದ ಜೀವನ ಒದಗಿಸಲು ಜಾನುವಾರುಗಳಿಂದ ಸಾಧ್ಯವಾಗಲಿಲ್ಲವೇ? ಅಕ್ಕಂದಿರ ಬಗ್ಗೆ ಪ್ರತ್ಯೇಕವಾಗಿ ಹೇಳುವುದೇ ಬೇಕಾಗಿಲ್ಲ. ಒಂದು ಸಣ್ಣ ಮೊತ್ತವೇ ಆಗಿರಲಿ, ಒಂದಿಷ್ಟು ಹೆಚ್ಚುವರಿ ಆದಾಯವನ್ನು ಅವರು ಅಮ್ಮನಿಗೆ ಕೊಡಲಿಲ್ಲ ಎಂದು ನಾನು ನಂಬಲಿಲ್ಲ. ಅಮ್ಮನ ಹಾಸಿಗೆಯತ್ತ ನೋಡಿದೆ. ಆ ತೆಳು ಹಾಸಿಗೆ ಅವಳಿಗೆ ಖಂಡಿತ ಆರಾಮದಾಯಕವಾಗಿರಲಿಲ್ಲ. ಅಲ್ಲಿದ್ದ ಬೆಳಕು ಸಹ ಏನಕ್ಕೂ ಸಾಲುತ್ತಿರಲಿಲ್ಲ; ನನ್ನ ಅಕ್ಕಂದಿರ ಮನೆಗಳಲ್ಲಿ ಆಗಲೇ ವಿದ್ಯುತ್ ಬಂದಿತ್ತು. ಮತ್ತೆ, ನಾನು ಮಾಮೂಲಾಗಿ ಕಳಿಸುತ್ತಿದ್ದ ಹಣ, ಹೆಚ್ಚೇನಲ್ಲದಿದ್ದರೂ, ಅವಳ ಜೀವನವನ್ನು ಸ್ವಲ್ಪಮಟ್ಟಿಗಾದರೂ ಉತ್ತಮಪಡಿಸಲು ಸಾಲುತ್ತಿತ್ತು. ಆದರೆ ಹೀಗೇಕೆ?

ಅವಳ ಪಕ್ಕದಲ್ಲಿದ್ದ ಹಳೆಯ ಓಕ್ ಮರದ ಮೇಜನ್ನು ನೋಡಿದೆ. ಅದರ ಮೇಲೆ ಅನೇಕ ಔಷಧಿಯ ಸೀಸೆಗಳಿದ್ದವು. ಕಾಗದದ ಚೂರುಗಳು ಮತ್ತು ಒಂದೆರಡು ಚೌಕಟ್ಟು ಹಾಕಿದ ಚಿತ್ರಗಳು. ಅವನ್ನು ಚೆನ್ನಾಗಿ ನೋಡಲೆಂದು ತುಸು ಮುಂದಕ್ಕೆ ಬಾಗಿದೆ. ಒಮ್ಮಿಂದೊಮ್ಮೆ ನನ್ನ ಕಣ್ಣು ಮಂಜಾಯಿತು....ನಾನು ಮೂಕಳಾದೆ. ಒಡನೆಯೇ ನಾನು ಅಳಬಾರದೆಂದು ಹತೋಟಿಗೆ ಬರಲು ಪ್ರಯತ್ನಿಸಿದೆ.

ನಾನೆಲ್ಲಿ ನೋಡುತ್ತಿದ್ದೇನೆಂದು ಅರಿತ ಅಮ್ಮ ವಿವರಿಸಿದಳು.. "ನಿನ್ನೀ ಅಕ್ಕಂದಿರನ್ನು ದೂಷಿಸಬೇಡ, ದಿಯಾ. ನಿನ್ನ ಚಿತ್ರಗಳು ಇರಲಿ ಎಂದು ನಾನೇ ಒತ್ತಾಯಿಸಿದೆ. ಕೆಲವೊಮ್ಮೆ ನಿನ್ನ ಅಗಲಿಕೆ ಕಾಡಿದಾಗ ನಾನು ಅವುಗಳನ್ನೇ ನೋಡುತ್ತಿದ್ದೆ. ನೋಡು, ಅದು ನೀನು ಮೊದಲನೆಯ ವರ್ಷದಲ್ಲಿದ್ದಾಗ ಇರಬಹುದಲ್ಲವೇ! ನೀನಿನ್ನೂ ಬುರಕಿ ಹಾಕಿಲ್ಲ. ಮಿಕ್ಕಿದ್ದರಲ್ಲೆಲ್ಲಾ ನೀನು ಸರಿಯಾಗಿ ಹಾಕಿಕೊಂಡಿದ್ದೀಯೆ. "

ಅಮ್ಮ ನಕ್ಕದ್ದನ್ನು ನಾನು ನೋಡಿದೆ. ಅವಳ ಕಣ್ಣುಗಳಲ್ಲಿ ಆಳವಾದ ಬಯಕೆಯಿತ್ತು. ನನಗೆ ಮತ್ತೆ ಗಾಬರಿಯಾಯಿತು. ನನ್ನ ಅಗಲಿಕೆ ಅವಳನ್ನು ಕಾಡಿತೆ? ಏನು ತಾನೆ ಅವಳನ್ನು ಇಷ್ಟೊಂದು ಬದಲಾಯಿಸಿತು? ಅವಳ ವೃದ್ಧಾಪ್ಯವೇ? ಈ ಐದು ವರ್ಷಗಳೇ? ನನ್ನ ಹೃದಯ ಕೇಳುತ್ತಲೇ ಇತ್ತು. ಅವಳ ಕಟುತ್ವ ಮತ್ತು ದ್ವೇಷಭರಿತ ಧೋರಣೆ ಎಲ್ಲಿ ಹೋದವು?

"ಸ್ವಲ್ಪ ಸಹಾಯ ಮಾಡು ಮಗಳೇ, ನಾನು ಜಗಲಿಯ ಮೇಲೆ ಕುಳಿತುಕೊಳ್ಳಬೇಕು", ಅಮ್ಮ ಇದ್ದಕ್ಕಿದ್ದಂತೆ ಹೇಳಿದಳು.

ಹೊರಹೋಗಲು ಅವಳ ದುರ್ಬಲ ದೇಹಕ್ಕೆ ಆಸರೆ ನೀಡಿದೆ. ಮೇಲಿನ ಆಕಾಶ ಕಪ್ಪಗಾಗಲಾರಂಭಿಸಿತ್ತು. ಆಗ ತಾನೆ ಮೂಡಿದ್ದ ಚಂದ್ರನೊಂದಿಗೆ ಹಲವಾರು ನಕ್ಷತ್ರಗಳೂ ಮಿನುಗಲಾರಂಭಿಸಿದ್ದವು. ರಾತ್ರಿಯನ್ನು ಸ್ವಾಗತಿಸುತ್ತಿದ್ದ ಕಿತ್ತಳೆ ಬಣ್ಣದ ಆಕಾಶ ಬಹಳ ಸುಂದರವಾಗಿತ್ತು.

ಜಗಲಿಯ ಮೇಲೆ ನಾವು ಅಕ್ಕಪಕ್ಕದಲ್ಲಿ ಕುಳಿತುಕೊಂಡೆವು. ಕೆಲ ಸಮಯ ಮೌನದಲ್ಲಿಯೇ ಕಳೆಯಿತು. ಮಾತಿಲ್ಲದಿದ್ದರೂ, ಅಮ್ಮನ ಪ್ರಸನ್ನವಾಗಿದ್ದ ಮುಖವನ್ನು ನಾನು ನೋಡಬಲ್ಲವಳಾಗಿದ್ದೆ. ಪೂರ್ಣಚಂದ್ರನಿಂದ ಅಲಂಕೃತವಾದ ಆಕಾಶದಂತೆ. ಆಗಲೆ...

"ನಿಂಗ್, ..ನಿಂಗ್ಲೀ.. ".ಅಮ್ಮ ಕೂಗುತ್ತಿದ್ದುದನ್ನು ಕೇಳಿಸಿಕೊಂಡ ಅಕ್ಕ ಧಾವಿಸಿ ಬಂದಳು.

"ಏನಮ್ಮಾ..? ".

"ನನ್ನ ಮಂಚದ ಕೆಳಗಿರುವ ಮರದ ಡಬ್ಬಿಯನ್ನು ದಯವಿಟ್ಟು ಸ್ವಲ್ಪ ತಂದು ಕೊಡುತ್ತೀಯಾ..? "

ಸ್ವಲ್ಪ ಸಮಯದ ನಂತರ ಅಕ್ಕ ನಿಂಗ್ ಮತ್ತೆ ಬಂದಳು. ಹಳತಾಗಿದ್ದ ಒಂದು ಮರದ ಡಬ್ಬಿಯನ್ನು ಅಮ್ಮನ ಕೈಗಿತ್ತಳು.

"ಇದನ್ನು ತೆರೆ ದಿಯಾ. ಇದು ನಿನಗಾಗಿಯೇ. ನಾನೇ ಖುದ್ದಾಗಿ ಇದನ್ನು ನಿನಗೆ ಕೊಡುವ ಅವಕಾಶ ಸಿಕ್ಕೀತೋ ಇಲ್ಲವೋ ಎಂಬ ಭಯ ನನಗೆ ಇದ್ದೇ ಇತ್ತು. ವಯಸ್ಸಾಗಿಬಿಟ್ಟಿತಲ್ಲಾ, ದಿಯಾ", ಅಮ್ಮ ಹೇಳಿದಳು. ಆಕೆಯ ಕಣ್ಣುಗಳು ಇನ್ನೂ ಆಕಾಶದತ್ತಲೇ ಇದ್ದವು. ನನಗೇನೂ ಅರ್ಥವಾಗದಿದ್ದರೂ ಅವಳ ಬೇಡಿಕೆಗೆ ಒಪ್ಪಿದೆ. ಅದರೊಳಗಿದ್ದುದನ್ನು ನೋಡಿದಾಗ ನನ್ನ ಕಣ್ಣುಗಳನ್ನು ಅರಳಿಸದೆ ಇರಲಾಗಲಿಲ್ಲ. ಹಣ! ಎಷ್ಟೊಂದು ಹಣ! ಬಹಳಷ್ಟು ಹಣವಿತ್ತು ಅದರಲ್ಲಿ. ಅಮ್ಮನಿಗೆ ಅದೆಲ್ಲಿಂದ ಬಂತೊ?

ನನ್ನ ಅಚ್ಚರಿ ಕಂಡು ಅಮ್ಮ ಸದ್ದಿಲ್ಲದೆ ಕೆಲ ಹಲ್ಲುಗಳು ಬಿದ್ದು ಹೋಗಿವೆ ಎಂಬುದನ್ನೂ ತೋರಿಸುತ್ತಾ ನಕ್ಕಳು..ಇದು ನಿನಗಾಗಿಯೇ ದಿಯಾ.

ನಾನು ಆ ಮರದ ಡಬ್ಬಿಯನ್ನು ಮುಚ್ಚಿ ಅವಳಿಗೆ ವಾಪಸ್ಸು ಕೊಟ್ಟೆ. "ನನಗೀಗ ಹಣದ ಅವಶ್ಯಕತೆಯಿಲ್ಲ, ಅಮ್ಮ. ನನಗೆ ಒಂದೆರಡು ವರ್ಷಗಳಿಂದ ಕೆಲಸ ಸಿಕ್ಕಿವೆ. ಒಂದು ಅಂಗಡಿಯನ್ನೂ ನೋಡಿಕೊಳ್ಳುತ್ತೇನೆ. ಅಲ್ಪಸ್ವಲ್ಪ ಬರವಣಿಗೆಯನ್ನೂ ಮಾಡುತ್ತೇನೆ". ನಾನು ಅವಳು ಕೊಟ್ಟದ್ದನ್ನು ನಿರಾಕರಿಸುವ ಪ್ರಯತ್ನದಲ್ಲಿ ಹೇಳಿದೆ.

"ನನಗೆ ಗೊತ್ತು...ನೀನು ನಿನ್ನ ಅಕ್ಕಂದಿರಿಗೆ ಕಳುಹಿಸಿದ ಪತ್ರಗಳನ್ನು ನಾನು ಓದುತ್ತೇನೆ..ಆದರೆ ಇದು ನಿನ್ನ ದುಡ್ಡು. ನಿನಗೆ ಇದರ ಅಗತ್ಯವಿದೆ. ಅದಕ್ಕೆ (ಅಗತ್ಯ ಬೀಳಲು) ಬಹಳ ಸಮಯವೇನೂ ಹಿಡಿಯದು. " ಅಮ್ಮನ ದನಿಯಲ್ಲಿ ಒತ್ತಾಯವಿತ್ತು.

ಓಹ್, ನನ್ನ ಪದವಿ ವಿಷಯವೇ...ಅವಳು ಯೋಚಿಸುತ್ತಿದ್ದುದು ಅದನ್ನೇ ಏನು?

"ನನ್ನ ಪದವಿಗೆ ಇಷ್ಟೊಂದು ಹಣ ಬೇಕಾಗುವುದಿಲ್ಲ, ಅಮ್ಮ." ನಾನು ಮತ್ತೆ ನಾಕರಿಸಿದೆ.

"ಆದರೆ ನೀನು ಅದನ್ನು ತೆಗೆದುಕೊಳ್ಳಲೇಬೇಕು, ದಿಯಾ. ಅದು ನಿನ್ನದೇ ದುಡ್ಡು. ನಿನ್ನ ಅಕ್ಕಂದಿರ ಮುಖಾಂತರ ನೀನು ನನಗೆ ಕಳುಹಿಸಿದ ಹಣ. ಜಾನುವಾರು ಮಾರಿ ಬಂದದ್ದರ ನಿನ್ನ ಪಾಲು ಸಹ ಅದರಲ್ಲಿದೆ", ಅವಳು ಮತ್ತೆ ವಿವರಣೆ ನಾಡಿದಳು.

ನನ್ನದು ಜೋಲುಮುಖವಾಯಿತು."ಕೋಣೆ ಯಲ್ಲಿದ್ದ ಅವಳ ಹಳೆಯ ಮಂಚ ಮತ್ತು ತೆಳುಹಾಸಿಗೆ, ಹಳೆಯ ಲಾಟೀನು, ಕೆಟ್ಟ ಕುರ್ಚಿಗಳು ಎಲ್ಲವನ್ನು ನಾನು ಜ್ಞಾಪಿಸಿಕೊಂಡೆ. ಕೊಳಕಾದ ಬೀರು. ಈ ಹಣ ಅವಳ ಜೀವನವನ್ನು ಹೆಚ್ಚು ಆರಾಮದಾಯಕವಾಗಿ ಮಾಡಲಾಗುತ್ತಿರಲಿಲ್ಲವೇ?

"ನಿನ್ನ ಅಗತ್ಯತೆಗಳಿಗೆ ಯಾಕೆ ಇದನ್ನು ಬಳಸಿಕೊಳ್ಳಲಿಲ್ಲ? "ನಾನು ಅಚ್ಚರಿಯಿಂದ ಕೇಳಿದೆ.

ಅಮ್ಮ ಸುಮ್ಮನೆ ನಕ್ಕಳಷ್ಟೆ. ಮೋಡಗಳಿಂದ ಅರ್ಧ ಮುಚ್ಚಿಹೋಗಿದ್ದ ಚಂದ್ರನನ್ನು ಅವಳ ಕಣ್ಣುಗಳು ಅರಸಿದವು.

"ಇಷ್ಟೊಂದು ಹಣದ ಅಗತ್ಯ ನನಗಿಲ್ಲ, ದಿಯಾ! ಅಲ್ಲದೆ, ಇನ್ನು ಹೆಚ್ಚು ಹಣ ನಾನೇನೂ ನಿನಗೆ ಕೊಡಲಾರೆ. "

"ನಾನು ನಾಗೆ ಹೇಳಿದೆ, ಬಹಳಷ್ಟು ಅಲ್ಲದಿದ್ದರೂ ಒಟ್ಟಿನಲ್ಲಿ ಈಗ ನನ್ನ ದುಡ್ಡು ನಾನೇ ದುಡಿದುಕೊಳ್ಳುತ್ತೇನೆ. ನನ್ನ ಬಗ್ಗೆಯೇ ಯೋಚಿಸುತ್ತಾ ನೀನೇನೂ ಕಾಳಜಿ ಪಟ್ಟುಕೊಳ್ಳಬೇಡ". ನಾನೂ ಮೊಂಡುತನದಿಂದ ಹೇಳಿದೆ.

ಆದರೆ ಮತ್ತೆ ಅಮ್ಮ ಅದನ್ನು ತೆಗೆದುಕೊಳ್ಳುವಂತೆ ನನ್ನನ್ನು ಪುಸಲಾಯಿಸಿದಳು. "ನಿನಗೆ ಅದರ ಅಗತ್ಯ ಬಂದೇ ಬರುತ್ತೆ ದಿಯಾ. ನಿನ್ನ ಮದುವೆಗೆ. ನಿನ್ನ ಅಕ್ಕಂದಿರೆಲ್ಲಾ ಸರಳವಾದ ಜೀವನ ನಡೆಸುತ್ತಾರೆ. ಅವರಿಗೆ ಮಕ್ಕಳುಮರಿಗಳಿವೆ. ನಿನ್ನ ಮದುವೆ ಸಮಯ ಬಂದಾಗ ಪ್ರಾಯಶಃ ಅವರು ನಾಗೆ ಏನೂ ಸಹಾಯ ಮಾಡಲಾರರು."

ಧಡ್! ನನ್ನ ಎದೆಬಡಿತ ತುಸು ಏರುಪೇರಾಯಿತು. ನನ್ನ ಮದುವೆಯೇ? ನನ್ನ ಬಗ್ಗೆ ಅಮ್ಮ ಅಷ್ಟು ಮುಂದಕ್ಕೆ ಯೋಚಿಸಿದಳೇ?

ಅವಳ ಮುಂದಿನ ಮಾತುಗಳು ನನ್ನ ಹೃದಯದ ಮೂಲೆಗಳ ಮೂಲಕ ಶಾಂತ ಸರೋವರ ಹರಿದು ಬಂದಂತಿತ್ತು.

"ನಿನ್ನ ಬಗ್ಗೆ ನಾನು ಬಹಳ ಕಟುವಾಗಿದ್ದೆ, ನನ್ನದೇ ತಪ್ಪು, ದಿಯಾ! ನೀನೇ ಸರಿ...ನಾನು ಬಹಳ ಅಲ್ಪಳು. ಅದೇಕೆಂದರೆ, ನಿನಗೆ ನೋವಾಗದಿರಲಿ ಎಂದು. ನಿನಗೆ ನಿರಾಶೆಯಾಗುವುದು ನನಗೆ ಇಷ್ಟವಿಲ್ಲ. ಅದಕ್ಕೇ ನಾನು ನಿನ್ನನ್ನು ಯಾವತ್ತೂ ಹೊಗಳಲಿಲ್ಲ. ಜೀವನವನ್ನು ನಡೆಸಲು ಉಕ್ಕಿನ ಹೃದಯ ಬೇಕೇ ಬೇಕು. ನನ್ನ ಕೊನೆಯ ಮಗಳು ಒಬ್ಬ ಅಪೂರ್ವ ವ್ಯಕ್ತಿಯಾಗಬೇಕು ಎಂದೇ ನಾನು ಬಯಸುತ್ತೇನೆ. ನಾವೆಲ್ಲ ನೋಡುವಂತೆ ಬೆಳ್ಳಿ ಚಂದ್ರನಂತಲ್ಲ, ಗುಲಾಬಿಬಣ್ಣದ ಚಂದ್ರನಂತೆ ಆಗಬೇಕು."

ಅಮ್ಮ ಹೊಳೆಯುತ್ತಿದ್ದ ಪೂರ್ಣ ಚಂದ್ರನತ್ತ ಬೆರಳು ತೋರಿಸಿದಳು. ಅವಳ ಬೆರಳನ್ನೇ ನನ್ನ ದೃಷ್ಟಿ ಅನುಸರಿಸಿತು. ಬಹಳ ಉಲ್ಲಾಸವೆನಿಸಿತು.

ಗುಲಾಬಿ ಚಂದ್ರ...ಅವಳು ಬಯಸಿದ್ದು ಅದನ್ನೇ ಏನು..ಯಾರೋ ಆಗಬೇಕೆಂದು? ನಿಜವಾದ ಅರ್ಥದಲ್ಲಿ ಏನಾದರೂ ಆಗಬೇಕೆಂದು? ಒಂದು ಅಪೂರ್ವ ವ್ಯಕ್ತಿತ್ವ ಉಳ್ಳವಳಾಗಿರಬೇಕೆಂದು, ಶಿಸ್ತು ನಿಯಮಗಳಿರ ಬೇಕೆಂದು. ಜೀವನದ ಕಷ್ಟಕಾರ್ಪಣ್ಯಗಳ ನಡುವೆ ಹಾದುಹೋಗಲು ಸನ್ನದ್ಧಳಾಗಿರಲು? ಈ ಎಲ್ಲ ದಿನಗಳೂ ತನ್ನ ಕಟುತ್ವದಿಂದ ಅವಳು ಹೇಳಿದ್ದು ಇದನ್ನೇ ಏನು?

ನನ್ನ ಹೃದಯ ಅರಳಿತು. ಅವಳ ಬಗ್ಗೆ ಇದ್ದ ಎಲ್ಲ ಖಾಲಿತನ, ದ್ವೇಷ ಹಾಗೂ ಅಸಮಾಧಾನ ಇದ್ದಕ್ಕಿದ್ದಂತೆ ಮೋಡಗಳಲ್ಲಿ ತೂರಿಹೋದವು. ಇನ್ನು ಮುಂದೆ ಅವಳನ್ನು ನಾನು ದ್ವೇಷಿಸುವುದಿಲ್ಲ. ಅಂತೂ ಅಮ್ಮನ ಕಣ್ಣುಗಳಲ್ಲಿ ನಾನೂ ಸಹ ಏನೋ ಒಂದು. ನಾನು ಅಮ್ಮನ ಕಣ್ಣುಗಳಲ್ಲಿ ಒಂದು ಚಂದ್ರಮ. ಅವಳ ಹೃದಯದಲ್ಲಿ ನಾನೊಂದು ಚಂದ್ರಮ. ಯಾವುದೇ ಅಳುಕಿಲ್ಲದೇ ನಾನು ಅಮ್ಮನನ್ನು ಅಪ್ಪಿ ಹಿಡಿದೆ.

ನಾವಿಬ್ಬರೂ ಜಗುಲಿಯ ಮೇಲೆ ಒಟ್ಟಾಗಿ ಕುಳಿತು ಅವಿಸ್ಮರಣೀಯ ಸಮಯ ಕಳೆದೆವು. ಸುಮ್ಮನೆ ಆಕಾಶವನ್ನು ನೋಡುತ್ತಾ ಹಾಗೂ ಚಂದ್ರನನ್ನು ನೋಡುತ್ತಾ. ನನ್ನ ದೃಷ್ಟಿಯಲ್ಲಿ ಈಗ ಗುಲಾಬಿಯಾಗಿದ್ದ ಚಂದ್ರನನ್ನು ನೋಡುತ್ತಾ!

*****

# ಅರಿವುಳ್ಳ ತಾಯ್ತನ

– ಶಾಂತಾ ನಾಗರಾಜ್

ಒಂದು ಮಧ್ಯಾಹ್ನ ಕಿಟಕಿಯಬಳಿ ಪುಸ್ತಕ ಓದುತ್ತಾ ಕುಳಿತವಳಿಗೆ ಹೊರಗಡೆಯಿಂದ ಬೀಡಿಯ ವಾಸನೆ ಬಂತು. ಯಾರು ನಮ್ಮ ಮನೆಯಮುಂದೇ ಬೀಡಿ ಸೇದುತ್ತಿರುವವರು ಎಂದು ನೋಡಲು ಹೊರಬಂದೆ. ನಾಲ್ಕುವರ್ಷ ವಯಸ್ಸಿನ ಒಂದು ಹುಡುಗ ಸ್ಟೈಲಾಗಿ ಆಕಾಶಕ್ಕೆ ಮುಖಮಾಡಿ ಹೊಗೆಬಿಡುತ್ತಾ ಬ್ರಹ್ಮಾನಂದ ದಲ್ಲಿದ್ದ!! ನೋಡಿ ಆಘಾತವಾಯಿತು. " ಏನೋ ಮರಿ ಬೀಡಿ ಸೇದ್ತಾಯಿದೀಯಾ"? ಎಂದೆ. ಹುಡುಗ ಮುಖ ಬಿರುಸು ಮಾಡಿ "ಯಾಕ್ರೀ ನಿಮಗೇನಾಯ್ತು"? ಎಂದ. "ಅಲ್ಲಪ್ಪಾ ನೀನಿನ್ನೂ ಸಣ್ಣವನಲ್ಲವೇನೋ" ಎಂದೆ ಮಮತೆಯಿಂದ. "ಅದ್ರೇನು? ನಾ ಗಂಡಸಲ್ಲವೇನೀ"? ಅಂದ ಅಷ್ಟೇ ಜೋರಾಗಿ. ಅವನುತ್ತರದಿಂದ ದಂಗಾಗಿ ಹೋದೆ. ಮತ್ತೆ ಛಲ ಬಿಡಬಾರದೆಂದು ಎಲ್ಲಿಲ್ಲದ ಗೌರವ ಪ್ರೀತಿಗಳಿಂದ ಅವನ ಬಗ್ಗೆ ಮೆಚ್ಚುಗೆಯ ಮಾತಾಡುತ್ತಲೇ ಬೀಡಿ ಸೇದುವುದರಿಂದಾಗುವ ಹಾನಿಯನ್ನು ಅವನಿಗೆ ಅರ್ಥವಾಗುವಹಾಗೆ ವಿವರಿಸಿದೆ. ಹುಡುಗ ಗೊಂದಲ ಗೊಂಡ. ನಾನು ಬಯ್ದಿದ್ದರೆ ಅವನ ಬತ್ತಳಿಕೆಯಲ್ಲಿ ಉತ್ತರಿಸಲು ಬೇಕಾದಷ್ಟು ಬಾಣಗಳಿದ್ದವು. ನಾನು ಅತಿ ಪ್ರೀತಿ ಮತ್ತು ಗೌರವಗಳಿಂದಲೇ ಹೇಳಿದ್ದರಿಂದ ಎದು ರಾಡಲು ಅವನಲ್ಲಿ ಪದಗಳಿರಲಿಲ್ಲ. ದಿಕ್ಕುತೋರದೇ ಬೀಡಿ ಬಿಸಾಡಿ ಮನೆಗೆ ಹೋದ. ನಾನೂ ಒಂದು ಮಗುವನ್ನು ಕೆಟ್ಟ ಚಟದಿಂದ ಹೊರಬರಲು 'ಎಜುಕೇಟ್' ಮಾಡಿ ದೆನೆಂಬ ತೃಪ್ತಿಯಿಂದ ಒಳಬಂದೆ. ಐದೇ ನಿಮಿಷ ಕಾಲಿಂಗ ಬೆಲ್ಲ್ ರಿಂಗಣಿಸಿತು. ಬಾಗಿಲುತೆರೆದು ನೋಡಿದರೆ ಒಬ್ಬ ಮಧ್ಯವಯಸ್ಸಿನ ಮಹಿಳೆ ನಿಂತಿದ್ದಳು. ಅವಳ ಹಿಂದೆ ಈ ಪೋರ ಇಣುಕಿ ಇಣುಕಿ ನೋಡುತ್ತಿದ್ದ. ನಾನೆಂದುಕೊಂಡೆ 'ಓಹೋ ಈ ಮಹಿಳೆ ನನಗೆ ಥಾಂಕ್ಸ್ ಹೇಳಲು ಬಂದಿದ್ದಾಳೆ, ಅವಳ ಮಗನನ್ನು ನಾನು 'ಸರಿ ಮಾಡಿದ್ದೇನೆ'ಎಂದು!! ಆದರೆ ಅವಳೋ ನನ್ನನ್ನೇ ಗುರಾಯಿಸುತ್ತಾ ಕೇಳಿದಳು "ನಿಮಗ್ಯಾಕ್ರೀ ನಮ್ಮನೆ ಸಮಾಚಾರಾ? ನಮ್ಮನೆ ಗಂಡಸ್ರು ಏನಾದ್ರೂ ಸಾವಿರ ಕೆಲಸ ಮಾಡ್ಕೋತಾರೆ ಅದನ್ನ ಕೇಳಕ್ಕೆ ನೀವ್ಯಾರೂ"? ಎಂದಳು. "ಅಲ್ಲಮ್ಮಾ ನಿನ್ನ ಮಗ ಬೀಡಿ ಸೇದುತ್ತಿದ್ದ ಅದು ಆರೋಗ್ಯಕ್ಕೆ ಒಳ್ಳೆಯದಲ್ಲಾ..." ಇನ್ನೂ ನನ್ನ ಮಾತು ಮುಗಿದಿರಲೇ ಇಲ್ಲ " ಐ ಸುಮ್ಕಿರ್ರೀ ಯಾವ್ದು ಒಳ್ಳೇದೂ ಯಾವ್ದು ಕೆಟ್ಟದ್ದೂ ನೀವ್ ಹೇಳ್ಬೇಕಾ? ನಮಗ್ ತಿಳಿಯಾಕಿಲ್ವಾ? ನನಗೆ ಎಂಟು ಜನ ಗಂಡು ಮಕ್ಳು. ಇವನ್ ಆರ್ನೇಯವನೂ. ಇನ್ನೂ ಎರಡು ಚಿಕ್ಕವವೆ. ಇವನಿನ್ನೂ ಇಸ್ಕೂಲಿಗೂ ಓಗಾಕಿಲ್ಲ, ಮನೆಯಾಗೇ ಇದ್ದು ಪ್ರಾಣತೆಗೀತವ್ನೆ. ಅದ್ಕೇ ಕಾಸುಕೊಟ್ಟೆ, ಬೀಡಿ ತಗೊಂಡಾ. ಗಂಡಸರು ಹೊರಗಡೆ ಸಾವಿರ ಯವಾರ ಮಡ್ಕೋತಾರೆ, ನಾವು ಎಂಗಸರು ಅದ್ನೆಲ್ಲಾ ಕೇಳ್ಬಾರ್ದು ತಕಳ್ಳೀ" ಎಂದವಳೆ ಬಂದಷ್ಟೇ ಬಿರುಸಾಗಿ ಹೊರಟೇ ಹೋದಳು.

ಇದು ಅವಳೊಬ್ಬಳ ತತ್ವವಲ್ಲ. ಭಾರತದ ಲಕ್ಷ ಲಕ್ಷ ಅನಕ್ಷರಸ್ಥ ತಾಯಂದಿರ ತತ್ವ. ಕೆಲವೊಮ್ಮೆ ವಿದ್ಯಾವಂತ ತಾಯಂದಿರೂ ಇದನ್ನೇ ಪರಮಸತ್ಯವೆಂದು ಭಾವಿಸಿರುತ್ತಾರೆ. "ಗಂಡಸರು ಹೊರಗಡೆ ಏನು ಮಾಡಿ ದರೂ ಹೆಂಗಸರಿಗೆ ಕೇಳುವ ಹಕ್ಕಿಲ್ಲ" ಇದು ನಿಜಕ್ಕೂ ಅಘಾತಕಾರಿಯಾದ ತತ್ವ. ಇದರಿಂದ ಮೊದಲು ಹಿಂಸೆ ಮತ್ತು ಆತಂಕಕ್ಕೆ ಗುರಿಯಾಗುವವಳು ತಾಯಿಯೇ. ಮಗ ಹೊರಗಡೆ 'ಏನೇನೋ' ಮಾಡಿಕೊಳ್ಳುತ್ತಾನೆ. ವಿದ್ಯೆಗೆ ಶರಣು ಹೊಡೆಯುತ್ತಾನೆ. ಕುಡಿತಕ್ಕೋ ಜೂಜಿಗೋ ಬಲಿಯಾಗುತ್ತಾನೆ. ಕಾಸಿಗಾಗಿ ಮೊದಲು ತಾಯಿಯನ್ನೂ ನಂತರ ಹೆಂಡತಿಯನ್ನೂ ಪೀಡಿಸುತ್ತಾನೆ. ಅವನ 'ತ್ವರಿತ ಸುಖಗಳ' ಆಮಿಷ ಬೆಳೆಯುತ್ತಾ ಹೋಗುತ್ತದೆ. ಸಾಲಗಾರನಾಗುತ್ತಾನೆ. ಅಥವಾ ದುಡಿಯಲು ದುರ್ಮಾ ರ್ಗಕ್ಕೆ ಇಳಿಯುತ್ತಾನೆ. ಮೊದಲು ಮನೆಗೂ ನಂತರ ಸಮಾಜಕ್ಕೂ ಆಮೇಲೆ ಸರ್ಕಾರಕ್ಕೂ 'ತಲೆನೋವಾ' ಗುತ್ತಾನೆ. ಸ್ವಸ್ಥ ಸಮಾಜದ ಕಾಳಜಿಯುಳ್ಳ ಎಲ್ಲರೂ ಚಿಂತಿಸಲೇ ಬೇಕಾದ ವಿಷಯವೆಂದರೆ ಈ ದಿನಗಳಲ್ಲಿ ಇಂಥವರ ಸಂಖ್ಯೆ ದಿನೇದಿನೇ ಹೆಚ್ಚುತ್ತಿರುವುದು. ಬೆಂಗಳೂರಲ್ಲಿ ಪ್ರತಿಬಾರಿ ದೊಂಬಿ ಗಲಾಟೆಗಳಾದಾಗಲೂ ಮಾಧ್ಯಮದವರು ಮನೋವೈದ್ಯರಾದ ಡಾ. ಸಿ.ಆರ್. ಚಂದ್ರಶೇಖರ್ ರವರನ್ನು 'ಇದಕ್ಕೆ ಕಾರಣವೇನು' ಎಂದು ಕೇಳುತ್ತಾರೆ. ಡಾ. ಸಿ.ಆರ್.ಸಿಯವರು ಪ್ರತಿಬಾರಿಯೂ ಅದೇ ಸ್ಪಷ್ಟ ಉತ್ತರ ನೀಡುತ್ತಾರೆ. 'ಇಂಥವರ ಬಾಲ್ಯ ಸರಿಯಾದ ರೀತಿಯಲ್ಲಿ ಇಲ್ಲದೇ, ಮಾರ್ಗದರ್ಶಕರಿಲ್ಲದೇ, ಅವರ ತಪ್ಪುಗಳನ್ನು ಲಕ್ಷಿಸುವವರಿಲ್ಲದೇ ಈ ಜನರ ಕ್ರೌರ್ಯ ಮತ್ತು ಸ್ವಾರ್ಥ ಸಮಾಜ ಘಾತುಕಶಕ್ತಿಯಾಗಿ ಬೆಳದಿದೆ' ಎನ್ನುವುದು.

ಹಡೆದ ಮಾತ್ರಕ್ಕೇ ಪ್ರತಿಯೊಬ್ಬರೂ 'ತಾಯಿ' ಯಾಗಿಬಿಡುವುದಿಲ್ಲ. ಪರಿಪೂರ್ಣ ತಾಯಿಯಾಗ ಬೇಕಾದರೆ 'ಸರಿಯಾಗಿ'ಸಾಕಲೂ ಬೇಕಾಗುತ್ತದೆ. ಸಾಕುವಿಕೆಯಲ್ಲಿ ಗಂಡಿಗೊಂದು ನಿಯಮ ಹೆಣ್ಣಿಗೊಂದು ನಿಯಮ ಭಾರತೀಯರಿಗೆ ನೀರುಕುಡಿದಷ್ಟು ಸಹಜ!! ಹೈಸ್ಕೂಲ್ ಓದುವ ಹುಡುಗ ಗೆಳೆಯನ ಮನೆಯಲ್ಲಿ ರಾತ್ರಿ ಹತ್ತುಗಂಟೆಯವರೆಗೆ ಓದಿ ಮನೆಗೆ ಬರುತ್ತೇನೆಂದರೆ ಅದು ಸರಿ ಅದೇ ಮಾತನ್ನು ಮಗಳು ಹೇಳಿದರೆ ಹೌಹಾರುತ್ತಾಳೆ ಅಮ್ಮ! ಪಾಕೆಟ್ ಮನಿ ಮಗನಿಗೆ ನೂರು ಸಾಲುವುದಿಲ್ಲ ವೆಂದರೆ ಇರಬಹುದು ಅಪ್ಪನಿಗೆ ಹೇಳಿ ಕೊಡಿಸೋಣ ಎನ್ನುವ ಭಾವ ಅಮ್ಮನಿಗೆ. ಅದೇ ಮಾತನ್ನು ಮಗಳು ಕೇಳಿದರೆ 'ನನಗೆ ನನ್ನಪ್ಪ ಕೊಡುತ್ತಿರಲಿಲ್ಲ ನಿನಗ್ಯಾಕೆ ಅಷ್ಟು ಹಣ' ಎನ್ನುವ ವಾದ ಅಮ್ಮನದು!! 'ಗಂಟಲೆತ್ತರಿಸಿ

ಮಾತಾಡಬೇಡ, ಎದುರು ವಾದಿಸಬೇಡ, ನಾನು ಕರೆದಲ್ಲಿಗೆ ಬಾ, ನಾನು ಹೇಳಿದ ಡ್ರೆಸ್ಸ್ ಹಾಕಿಕೋ, ಹಿರಿಯರಿಗೆ ತಗ್ಗಿ ಬಗ್ಗಿ ನಡೆ, ಮದುವೆಯಾಗುವವರೆಗೂ ನನ್ನ ಮಾತನ್ನು ಕೇಳು, ಇದು ನಿನ್ನ ಒಳ್ಳೆಯದಕ್ಕೇ, ಇತ್ಯಾದಿ ಇತ್ಯಾದಿ ಕಟ್ಟು ಪಾಡುಗಳು ಅಮ್ಮನಿಂದ ಹುಡುಗಿಗೆ ಮಾತ್ರ! ಮಗನಿಗೆ ಇಷ್ಟವಾದ ಅಡುಗೆ ಮಾಡಬೇಕು, ಅವನು ಮದುವೆಮನೆಗೆ ಬರದಿದ್ದರೂ ಚಿಂತೆಯಿಲ್ಲ ಅವನಿಗಾಗಿ ಅಡುಗೆ ತಿಂಡಿ ಗಳನ್ನು ಮಾಡಿಟ್ಟು ಹೋಗುತ್ತೇನೆ, ಅವನ ಖರ್ಚುಗಳು ಬಹಳವೆ ಅಪ್ಪನಿಗೆ ಹೇಳಿ ಹೆಚ್ಚು ಹಣಕೊಡಿಸಬೇಕು, ಇತ್ಯಾದಿ ಇತ್ಯಾದಿ ಕಾಳಜಿಗಳು ಮಗನ ಪಾಲಿಗೆ!! ಮಗನ ಎಲ್ಲ 'ಯವಾರ'ಗಳನ್ನೂ ಒಪ್ಪುವ, ಮೆಚ್ಚುವ, ಸಹಕರಿಸುವ ಅಮ್ಮಂದಿರೇ ನಮ್ಮಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ. ಏಕೆಂದರೆ ಅಮ್ಮನ ಪಾಲಿಗೆ ಮಗ ಆಕಾಶದಿಂದ ಇಳಿದವ!!!

ಮನಃಶಾಸ್ತ್ರದ ಪಿತಾಮಹ ಸಿಗ್ಮೆಂಡ್ ಫ್ರಾಯ್ಡನ ಪ್ರಕಾರ ಅಮ್ಮನಿಗೆ ಮಗನಲ್ಲೂ ಅಪ್ಪನಿಗೆ ಮಗಳಲ್ಲೂ ಆಸಕ್ತಿಹೆಚ್ಚು. ಏಕೆಂದರೆ ಅವರು ಬೇರೆ ಬೇರೆ ಲಿಂಗಿಗಳಾಗಿರುವುದರಿಂದ. ಆ ವಿಚಾರ ಹಾಗಿರಲಿ ಏಕೆಂದರೆ ಫ್ರಾಯ್ಡನ ಎಲ್ಲ ವಿಚಾರಗಳನ್ನೂ ನಾವು ಒಪ್ಪುತ್ತೇವೋ ಬಿಡುತ್ತೇವೋ ಅದಿಲ್ಲಿ ಅಗತ್ಯವಿಲ್ಲ. ಆದರೆ ಅವನ ಹೇಳಿಕೆಯಂತೆ ಇರುವ 'ಅಮ್ಮ ಮಗ'ನ ಪರಸ್ಪರ ಆಕರ್ಷಣೆಯ ಸಹಜ ಸ್ವಭಾವವನ್ನು ನಿಜವಾಗಿಯೂ ಬುದ್ಧಿಪೂರ್ವಕವಾಗಿ, ಸಕಾರಾತ್ಮಕವಾಗಿ ಬಳಸಿಕೊಂಡರೆ ನಿಜಕ್ಕೂ ಸಮಾಜ ಘಾತುಕನಲ್ಲದ ಪ್ರಜೆಗಳನ್ನು ಎಲ್ಲ ಅಮ್ಮಂದಿರೂ ಸೃಷ್ಟಿಸಬಹುದು. ಅದನ್ನೇ ನಾನಿಲ್ಲಿ 'ಅರಿವುಳ್ಳ ತಾಯ್ತನ' ಎಂದಿರುವುದು. ಮೊದಲ ಆರು ವರ್ಷಗಳು ಮಗುವಿಗೆ ಅಮ್ಮನೇ ಸರ್ವಸ್ವವಾಗಿರುತ್ತಾಳೆ. ಇದು ಎಲ್ಲ ವರ್ಗಕ್ಕೂ ಸಲ್ಲುವ ಮಾತು. 'ನಾನು ನನ್ನ ಮಗುವಿಗೆ ಸರ್ವಸ್ವ ವಾಗಿದ್ದೇನೆ' ಎನ್ನುವ ಅರಿವೇ ಮೊದಲು ಮುಖ್ಯವಾಗಿ ತಾಯಿಗೆ ಇರಬೇಕು. ಎರಡನೆಯದಾಗಿ ಈ ಸೌಲಭ್ಯವನ್ನು ಬಳಸಿಕೊಂಡು ಮಗುವನ್ನು 'ತಿದ್ದುವ' ವಿವೇಕ ತಾಯಿಗಿರಬೇಕು. ಹೊಡೆಯುವ ಬಡಿಯುವ ಯಾವ ಶಿಕ್ಷೆಯ ಅಗತ್ಯವೂ ಈ ಹಂತಕ್ಕೆ ಬೇಡ. ದುರಂತವೆಂದರೆ ಅನೇಕ ತಾಯಂದಿರು ಮಗುವನ್ನು ತಿದ್ದುವುದು ಎಂದರೆ 'ಅದರ ತಪ್ಪನ್ನು ಹುಡುಕುವುದು ಮತ್ತು ಶಿಕ್ಷಿಸುವುದು' ಎಂದುಕೊಂಡಿರುತ್ತಾರೆ. ನಾವೊಮ್ಮೆ ಸ್ಲಂ ಏರಿಯಾ ಮಕ್ಕಳನ್ನು ಹಿಡಿದು ನಾಟಕವನ್ನು ಹೇಳಿಕೊಟ್ಟೆವು. ಪ್ರಾಕ್ಟಿಸಿಗೆ ಬರುವಾಗ ಗಂಡು ಮಕ್ಕಳು ಜೋಬಿನಲ್ಲಿ ಚಾಕು ಬ್ಲೇಡು ಇತ್ಯಾದಿಗಳನ್ನು ಇಟ್ಟುಕೊಂಡು ಬರುತ್ತಿದ್ದರು. ಎಲ್ಲರೂ ಆರರಿಂದ ಎಂಟುವರ್ಷದ ಒಳಗಿನವರು. "ಇದ್ಯಾಕ್ರೋ ಇದನ್ನ ತಂದಿದೀರಾ"? ಎಂದರೆ ಉತ್ತರ ಸರಳ! "ನಮ್ಮಮ್ಮ ನಾನು ತಪ್ಪು ಮಾಡಿದ್ರೆ ಪರಕೇಲಿ ಬಡೀತೈತೆ, ನನ್ನ ತಂಟೆಗೆ ಯಾರಾರ ಬಂದ್ರೆ ನಾನು ಚಾಕೂನೋ ಬ್ಲೇಡ್ನೋ ಹಾಕ್ತೀನ" ಮಕ್ಕಳಿಗೆ ಕ್ರೌರ್ಯದ ಮೂಲ ತಂದೆ ಯೊಬ್ಬನಿಂದಲೇ ಅಲ್ಲ, ಹತಾಶಳಾದ ದಿಕ್ಕುಕೆಟ್ಟ ತಾಯಿಯಿಂದಲೂ ಬರಬಹುದು!!

ಹಿಂದೆ ಅಮೆರಿಕಾದ ಕಪ್ಪುಜನಾಂಗ ಬಿಳಿಯರ ಕ್ರೌರ್ಯವನ್ನೇ ಉಂಡು ಬೆಳೆದು. 'ಕ್ರೌರ್ಯದ ವಾತಾವರಣದಲ್ಲಿ' ಕರಿಯರ ಏಳಿಗೆಗಾಗಿ ತನ್ನ ಬರವಣಿಗೆಯ ಮೂಲಕ ಶ್ರಮಿಸಿದ ಫ್ರಾನ್ಸ್ ಎಲೆನ್ ವ್ಯಾಟ್ ಕಿನ್ಸ್ ಹಾರ್ಪರ್ ಎನ್ನುವ ಲೇಖಕಿ, 1892ರ ನವೆಂಬರ್ 15ರಂದು ಬೂಕರ್ ಸಾಹಿತ್ಯ ಸಮ್ಮೇಳನದಲ್ಲಿ ಮಾಡಿದ ಭಾಷಣದ ಕೆಲವು ಸಾಲುಗಳು ಹೀಗಿವೆ " ಪ್ರತಿ ತಾಯಿಯೂ ನಿಜವಾದ ಕಲಾವಿದೆಯಾಗಲು ಯತ್ನಿಸಬೇಕು. ಹಾಗೆಂದ ಮಾತ್ರಕ್ಕೇ ಆಕೆ ಚಿತ್ರಕಲಾವಿದೆ, ಹಾಡುಗಾರ್ತಿ, ಕವಿ ಲೇಖಕಿ, ಶಿಲ್ಪಿ ಮತ್ತೇನೋ ಆಗಿರಬೇಕೆಂದು ನಾನಿಲ್ಲಿ ಹೇಳುತ್ತಿಲ್ಲ. ಮುಗ್ಧ ಮಕ್ಕಳ ಭಾವನೆ, ಚಿಂತನೆಗಳನ್ನು ರೂಪಿಸುವ ಕಲಾವಿದೆ ಯಾಗಬೇಕು. ಮಕ್ಕಳು ಬೆಳೆದು ದೊಡ್ಡವರಾದ ಮೇಲೆ, ಮನಸ್ಸು ಹತೋಟಿ ತಪ್ಪುವ ಅಗ್ನಿದಿವ್ಯದ ಗಳಿಗೆಗಳಲ್ಲಿ ತಾಯಿ ಕಲಿಸಿದ ಪಾಠ ಅವರನ್ನು ದೇವತೆಯಂತೆ ಮುನ್ನಡೆಸಬೇಕು. ಕಷ್ಟದ ಸಮಯದಲ್ಲಿ ಕವಚದಂತೆ ಕಾಯಬೇಕು. ಉದಾತ್ತ ಗುರಿಗಳ ದಾರಿಯಲ್ಲಿ ಕೊಂಡೊಯ್ಯಬೇಕು........ ತಾಯಿಯೊಬ್ಬಳ ತಯ್ತನದ ಹೊಣೆಗಾರಿಕೆ ರಾಣಿಯೊಬ್ಬಳು ಧರಿಸುವ ಕಿರೀಟಕ್ಕಿಂತ ಅಮೂಲ್ಯವಾದುದು" (ಅನುವಾದ ಶ್ರೀಮತಿ ಎಂ.ಆರ್. ಕಮಲಾ, ಪುಸ್ತಕ 'ಉತ್ತರ ನಕ್ಷತ್ರ') ಆಕೆ ಮುಂದುವರೆದು ಹೇಳುತ್ತಾಳೆ 'ಹೆಣ್ಣುಮಕ್ಕಳನ್ನು ಬೆಳೆಸುವ ಶುದ್ಧ ಪರಿಸರದಲ್ಲೇ ಅದೇ ಕಾಳಜಿಗಳಿಂದ ಗಂಡನ್ನೂ ಬೆಳೆಸಿ' 'ಜಾಣೆಯಾಗಿದ್ದ ನನ್ನ ತಾಯಿ ಬದುಕಿನ ಪ್ರತಿ ಘಟ್ಟದಲ್ಲಿಯೂ ನನ್ನನ್ನು ಎಚ್ಚರಿಸುತ್ತಿದ್ದಳು' ಎಂದು ಗಂಡು ಮಕ್ಕಳು ಹೇಳುವಂತಾಗಬೇಕು ಎನ್ನುವ ಆಶಯವನ್ನೂ ಪ್ರಕಟಿಸುತ್ತಾಳೆ.

ಅರಿವುಳ್ಳ ತಾಯ್ತನದ ಬಗ್ಗೆ ಮಾತಾಡುವಾಗ ಆನುವಂಶಿಕ ನಡವಳಿಕೆಯ ಬಗ್ಗೆ ಮತ್ತು ಪರಿಸರದ ಪ್ರಭಾವದ ಬಗ್ಗೆಯೂ ಚಿಂತಿಸ ಬೇಕಾಗಿದೆ. ಸದಾ ಕುಡಿಯುವ, ರಾತ್ರಿ ಹಗಲೂ ಹೆಂಡತಿಯನ್ನು ಹೊಡೆಯುವ, ಬಾಯಿತೆರೆದರೆ ನಿರರ್ಗಳವಾಗಿ ಹೊಲಸು ಮಾತುಗಳನ್ನು ಉದುರಿಸುವ ಅಪ್ಪಂದಿರ ಗಂಡು ಮಕ್ಕಳು ಹೆಣ್ಣಿನ ಬಗ್ಗೆ ಯಾವ ಗೌರವವನ್ನು ಇಟ್ಟುಕೊಳ್ಳಬಲ್ಲರು? ಇಂಥವರಿಗೆ ತಾಯಿಯೂ ಅಷ್ಟೆ, ಬೇರೆ ಯಾರೇ ಹೆಂಗಸರಾದರೂ ಅಷ್ಟೆ.ತಮ್ಮ ಅಗತ್ಯಗಳನ್ನೂ ಪೂರೈಸಲೇ ಹುಟ್ಟಿರುವವರು. ಇಂಥ ಪರಿಸರದಲ್ಲಿ ತನ್ನ ಮಕ್ಕಳನ್ನು ಬೆಳೆಸಬೇಕಾದ ತಾಯಿಗೆ ಹೊರಗಿನಿಂದಲಾದರೂ ಸಂಪೂರ್ಣ ಭರವಸೆ ಸಿಕ್ಕಬೇಕಾಗುತ್ತದೆ. ಅಷ್ಟೇ ಅಲ್ಲ ಇಂಥ ಪರಿಸರದಲ್ಲೂ ಮಗನನ್ನು ಮಗನನ್ನು ಸರಿಯಾದ ದಾರಿಯಲ್ಲಿ ನಡೆಸಲು ಅವಳಿಗೆ ವಿಶೇಷವಾದ ಆತ್ಮಬಲ ಬೇಕಾಗುತ್ತದೆ. *

## "ಕಸೂತಿ" ಜೊತೆಗೆ ಒಂದಿಷ್ಟು ಚೌಕಾಸಿ :-

– ಡಾ ॥ ಬಿ.ಎನ್.ಸುಮಿತ್ರಾಬಾಯಿ

ಪರಂಪರೆಯಿಂದ ಮಹಿಳೆಯರ ಸ್ವಾಮ್ಯಕ್ಕೆ ಒಳಪಟ್ಟ ಒಂದು ಕರಕುಶಲ ಕಲೆಯಾದ ಕಸೂತಿ, ಮಹಿಳೆಯರ ಸೃಜನಶೀಲ ಅಭಿವ್ಯಕ್ತಿ ಮತ್ತು ಕಲಾವಂತಿಕೆಗಳ ತಾಣವೂ ಹೌದು. ಪ್ರಧಾನ ಸಂಸ್ಕ್ರತಿಯ ಶಿಷ್ಟಕಲೆಗಳ ಶ್ರೇಣಿಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗುವ ಕಸೂತಿ ಕಲೆಯೇ ಜೀವನಕ್ಕೆ ಆಧಾರವಾಗಿರುವ ದುಡಿಮೆಗಾರರ ಸಮುದಾಯಗಳು ಬಹುಶಃ ಭಾರತದ ಎಲ್ಲ ಪ್ರಾಂತಗಳಲ್ಲೂ ಇವೆ. ಗೃಹೋದ್ಯಮದ ಕ್ಷೇತ್ರಗಳಲ್ಲಿ ಒಂದಾಗಿ ಕಸೂತಿ ಇಂದಿನ ಜಾಗತೀಕರಣದ ಪ್ರಕ್ರಿಯೆಯಲ್ಲಿ ವಿಶ್ವ ಮಾರುಕಟ್ಟೆಯಲ್ಲಿ ಜಾಗಕ್ಕಾಗಿ ಪೈಪೋಟಿಸುತ್ತಿದೆ. ಜಾಗತೀಕರಣಕ್ಕೆ ಪ್ರತಿರೋಧವನ್ನು ಒಡ್ಡುವ ದೇಶೀ ಸಾಂಸ್ಕ್ರತಿಕ ನೆಲೆಗಳನ್ನು ಮೇಲೆತ್ತಿ ಹಿಡಿವ ಪ್ರಕ್ರಿಯೆಯೂ ಇಂದು ಅರ್ಥ ಪಡೆಯುತ್ತಿದೆ. ಅದೇ ರೀತಿ ಮಹಿಳೆಯರ ದಮನಿತ ಅನುಭವ, ಕಲೆ, ಸಂಸ್ಕೃತಿಗಳನ್ನು ಮುಖ್ಯವಾಹಿನಿಗೆ ತಂದು ಸಂಕಥನಕ್ಕೆ ಒಳಗು ಮಾಡುವುದೂ ಇಂದಿನ ಸಾಂಸ್ಕೃತಿಕ ಕ್ಷೇತ್ರದ ಮುಖ್ಯ ವಿದ್ಯಮಾನಗಳಲ್ಲೊಂದು.

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಸಂಪಾದಕಿ ಉಷಾ ಅವರ ಚೊಚ್ಚಲ ಕಾದಂಬರಿಯಾದ "ಕಸೂತಿ" ಒಂದು ವಿಶಿಷ್ಟ ರೀತಿಯ ಮಹಿಳಾ ಪ್ರಜ್ಞೆಯ ಮೂಲಕವಾಗಿ ಕಳೆದ ಒಂದು ಶತಮಾನದ ಚರಿತ್ರೆಯನ್ನು, ಸಮಾಜದ ಒಂದು ಚಿಕ್ಕ ಗುಂಪಿನ ಮಹಿಳೆಯರ ಅನುಭವಗಳ ಮೂಲಕ ಮರುಶೋಧಿಸುವ ನಮ್ರ ಯತ್ನವೆಂದು ಓದಲು ಸಾಧ್ಯವಿದೆ. ಸ್ಥೂಲವಾಗಿ ಹೇಳುವುದಾದರೆ ಮೂರು ತಲೆಮಾರುಗಳ ಮಹಿಳೆಯರ ಜೀವನಾನುಭವಗಳ ಕಥನದ ಮೂಲಕ ಆ ವ್ಯಕ್ತಿಗಳಲ್ಲಿ ಒಬ್ಬೊಬ್ಬರಲ್ಲೂ ಇರುವ ವಿಶಿಷ್ಟವಾದ ಚೈತನ್ಯ, ಶಕ್ತಿ ಸಾಮರ್ಥ್ಯಗಳನ್ನು ಅನಾವರಣಗೊಳಿಸುವ ಪ್ರಯತ್ನ ಇಲ್ಲಿದೆ. ಇವರಾರೂ ಚರಿತ್ರೆಯ ನಿರ್ಮಾಪಕರಲ್ಲ. ಬದಲಾಗಿ ದೇಶವಿಡೀ ಸಾಂಸ್ಕೃತಿಕವಾಗಿ ಸ್ಥಿತ್ಯಂತರಕ್ಕೆ ಒಳಗಾಗುತ್ತಿರುವಾಗ, ಹಳ್ಳಿಗಳ ಸಾಂಪ್ರದಾಯಿಕ ಸ್ಥಿರ ಬದುಕಿನಿಂದ ಹೊರ ಜಗತ್ತಿಗೆ ಬಂದು ಅಲ್ಲಿನ ಬದಲಾದ ಬದುಕಿನ ವಿಧಾನಗಳಿಗೆ ಹೊಂದಿಕೊಳ್ಳುತ್ತಾ ತಮ್ಮ ಬದುಕನ್ನು ಕಟ್ಟಿಕೊಳ್ಳುವ ಸಾಮಾನ್ಯತಿ ಸಾಮಾನ್ಯ ಹೆಣ್ಣುಗಳೇ ಇವರಲ್ಲಿ ಹೆಚ್ಚಾಗಿದ್ದಾರೆ. ಈ ಮಹಿಳೆಯರ ಜೀವಂತಿಕೆ, ಜೀವನ ಸರಳತೆ ಇವರ ಪ್ರತಿಭಾ ಕಲಾ ಸೃಷ್ಟಿಯೆಲ್ಲಕ್ಕೂ "ಕಸೂತಿ" ಒಂದು ಸಂಕೇತವಾಗಿದೆ. ಮಹಿಳೆಯರ ನಿಟ್ಟಿನಿಂದಲೇ ಬದುಕಿನ ದರ್ಶನವೊಂದನ್ನು ಧ್ವನಿಸುವ ಯತ್ನವಾಗಿ ಅವರ ಅಭಿವ್ಯಕ್ತಿಗೆ ಕಸೂತಿಗೆ ಒಂದು ಮಾನ್ಯತೆಯನ್ನು ಘನತೆಯನ್ನು ದೊರಕಿಸುವ ಆಶಯದಿಂದ ಬಹುಶಃ ಉಷಾ ಈ ಹೆಸರನ್ನು ಆಯ್ದುಕೊಂಡಿರುತ್ತಾರೆ ಎಂದು ನಾನು ಭಾವಿಸಿದ್ದೇನೆ.

ಕಸೂತಿಯನ್ನು ಒಂದು ರೂಪಕವಾಗಿ ಬೆಳೆಸಲು ಉಷಾ ಅವರು ಕೃತಿಯಲ್ಲಿ ಸಾಕಷ್ಟು ಲೆಕ್ಕಾಚಾರದಿಂದ ಪ್ರಯತ್ನಮಾಡಿರುವುದನ್ನು ಕಾಣಬಹುದು. ಕಾದಂಬರಿಯ ಆರಂಭಕ್ಕೆ ಮೊದಲು ಮುದ್ರಿತವಾಗಿರುವ ಶಿಶುನಾಳ ಷರೀಫರ ತತ್ತ್ವಪದ "ಸೂಜಿಯ ಹಾಡು" ಜಗತ್ತನ್ನೇ ಹೊಲಿಯ ಬಲ್ಲ ಶಕ್ತಿಯಾದ ಸೂಜಿಯ ಬಗ್ಗೆ ಆಧ್ಯಾತ್ಮಿಕವಾಗಿ ಮಾತನಾಡುತ್ತದೆ. ಆ ಸೂಜಿಯ ಪ್ರತಿಮೆಯನ್ನು ಕಲಾಸೃಷ್ಟಿಯ ಒಂದು ಅರ್ಥದಲ್ಲಿ ತಮ್ಮದಾಗಿಸಿಕೊಳ್ಳುವ ಲೇಖಕಿ ಸೂಜಿಯೊಂದರ ಕಥೆಯಿಂದಲೇ ಕಾದಂಬರಿಯನ್ನು ಆರಂಭಿಸಿ, ನಂತರ ಅದಕ್ಕೆ "ಕಸೂತಿ ಡಬ್ಬಿ" ಯು ಪ್ರಾಪ್ತವಾಗುವ ಪ್ರಸಂಗವನ್ನು ಜೋಡಿಸುತ್ತಾರೆ. ಆ 'ಕಸೂತಿಡಬ್ಬಿ' ಯ ಒಡತಿಯ ಬದುಕಲ್ಲಿ ಅದು ಕರಕೌಶಲದ ಪ್ರಯತ್ನಗಳಿಗೆ ಸಾಧನವಾಗುತ್ತದೆ. ಮುಂದೆ ಪೀಳಿಗೆಯಿಂದ ಪೀಳಿಗೆಗೆ ರವಾನೆಯಾಗುತ್ತಾ ಕೊನೆಗೆ ಮೂರನೆಯ ಪೀಳಿಗೆಯ ವಿದ್ಯಾಳಿಗೆ ಸ್ವಯಂ ಉದ್ಯೋಗದ ದಾರಿಯನ್ನು ಕಂಡುಕೊಳ್ಳಲು ಪ್ರೇರಣೆ ನೀಡುತ್ತದೆ. ಕೃತಿಯ ಉದ್ದಕ್ಕೂ ಕಸೂತಿ ಸೂಜಿಯನ್ನು ಉಲ್ಲೇಖಿಸುವ ಅನೇಕ ಸಂದರ್ಭ ಗಳನ್ನು ಕಾಣಬಹುದು. ಕಾದಂಬರಿಯ ಕೊನೆಗೆ ಲೇಖಕಿ ತಾನೇ ಆ ಸೂಜಿಯೆಂದು ವಾಚ್ಯವಾಗಿಯೂ ಹೇಳುತ್ತಾರೆ.

ಇಷ್ಟೆಲ್ಲ ಎಚ್ಚರಿಕೆಯಿಂದ ಈ ಸೂಜಿ, ಕಸೂತಿಗಳ ಪ್ರತಿಮೆ, ರೂಪಕಗಳನ್ನು ಬೆಳೆಸಲಾಗಿದ್ದರೂ ಈ ರೂಪಕವು ಕಸೂತಿ ಕಲೆಗಾರರೂ, ಅದರ ಉತ್ಪಾದನೆಯ ದುಡಿಮೆಗಾರರೂ ಆದಂಥ ಮಹಿಳೆಯರನ್ನೇನೂ ಮುಟ್ಟಲಾರದು. ಹಾಗೆಯೇ ಕಲಾತ್ಮಕ ಅಭಿವ್ಯಕ್ತಿಗಾಗಿ ಕಸೂತಿಯನ್ನೇ ಉಸಿರಾಗಿಸಿಕೊಂಡ ಕಲಾವಿದೆಯರಾದ ಮಹಿಳೆಯರ ಸೃಜನಶೀಲ ನೆಲೆಗಳ ಉತ್ಕಟ ಶೋಧನೆಗೂ ಇಲ್ಲಿ ಜಾಗವಿಲ್ಲ. ಹಾಗಿದ್ದ ಮೇಲೆ ಬರೀ "ಕಸೂತಿ" ಎಂಬ ಪದವೊಂದನ್ನೇ ಧ್ಯಾನಿಸಿದಾಗ ಮನದಲ್ಲಿ ಹೊಮ್ಮ ಬಹುದಾದ ಬಹುಸ್ತರೀಯ ಅರ್ಥ ಸಾಧ್ಯತೆಗಳತ್ತ ಹುಡುಕಾಟವನ್ನು ಬಿಟ್ಟು ಲೇಖಕಿಯೇ ಕಾದಂಬರಿಯ ಕೊನೆಗೆ ನಮಗೆ ಒದಗಿಸುವ ದಿಕ್ಸೂಚಿಯೊಂದನ್ನೇ ಅನುಸರಿಸದಲ್ಲಿ ಕೃತಿಯ ಅರ್ಥ, ಆಶಯಗಳು ಸುಲಭವಾಗಿ ವಿಶದವಾಗಬಲ್ಲವು. ಕಾದಂಬರಿಯ ಕೊನೆಯಲ್ಲಿ ಬರುವ ಈ ಪ್ಯಾರಾವನ್ನು ನೋಡಬಹುದು. ".... ಮತ್ತೊಮ್ಮೆ ಈ ಕಥೆಯ ಲೋಕದ ಬಾಗಿಲುಗಳು ಇನ್ನಾವುದೋ ಪುಟ್ಟ ಸೂಜಿಗೆ ತೆರೆಯಬಹುದು. ಮದುವೆ ಮನೆಯಲ್ಲೋ ಜಟಕಾದಲ್ಲೋ ರಿಕ್ಷಾದಲ್ಲೋ ಕಾರಿನಲ್ಲೋ ಸಣ್ಣ ಸೂಜಿಯೊಂದು ತೂಕಡಿಸುವಾಗ ಸೀರೆ ಬದಲಾಯಿಸುವ ಸರಭರ ಸದ್ದುಗಳ ನಡುವೆ ಹೊಸ ಮದುವಣಗಿತ್ತಿಯರ ಪಿಸುಮಾತು, ಕನ್ನೆಯ ಕಳವಳ, ಕಣ್ಣೀರು, ಅಜ್ಜಿಯರ

ಸಾಂತ್ವನ, ನಿಶ್ಶಬ್ದ ಮಧ್ಯಾನಗಳಲ್ಲಿ, ಜಗುಲಿ ಕಟ್ಟೆಯ ಮೇಲೆ ಕೂತ ವೃದ್ಧೆಯರ ಆತ್ಮೀಯ ಮಾತುಕತೆ, ನೆನಪಿನ ಬುತ್ತಿಗಳು ಕಾಡುಹರಟೆ, ಮೂಢಪ್ರಸಂಗ ಎಂದು ಕರೆಯಲಾಗುವ ಸಂಗತಿಗಳು ಪಂಚರಂಗಿ ಸೂಜಿಯ ಕಣ್ಣಲ್ಲಿ ತೂರಿ ಅನಂತದ ವಿಸ್ತಾರವನ್ನು ಕಸೂತಿ ಮಾಡುತ್ತವೆ.."

ದಿನನಿತ್ಯದ ಬದುಕಲ್ಲಿ ಅರ್ಥ ಹೀನವೆಂದು, ಸಹಜ ವೆಂದು ಯಾರ ಗಮನಕ್ಕೂ ಬಾರದ ಸನ್ನಿವೇಶಗಳೇ ಹೇಗೆ ಸಂವೇದನಾಶೀಲ ಮನದ ಕಣ್ಣಿಗೆ ಬಣ್ಣ ಬಣ್ಣದ ಆಕಾರ ಕಟ್ಟಲು ಮೂಲದ್ರವ್ಯ ಆಗಬಲ್ಲವು ಎಂದು ಹೇಳುವ ಮೂಲಕ ಉಷಾ ಈ ಕಾದಂಬರಿಯ ಸೃಷ್ಟಿಯಲ್ಲಿನ ತನ್ನ ನಿಲುವನ್ನೂ ಸ್ಪಷ್ಟಪಡಿಸುತ್ತಾರೆ. ತುಂಬ ಭಾವದ ಭಾರವುಳ್ಳ 'ಪಂಚರಂಗಿ' ತನ 'ಅನಂತದ ವಿಸ್ತಾರ' ದಂಥ ಪದಗಳು ಇಲ್ಲಿದ್ದರೂ ಪ್ರಸ್ತುತ ಕೃತಿಯ ಸಾಪೇಕ್ಷವೂ ಪರಿಮಿತವೂ ಆದ ಅರ್ಥದಲ್ಲಿ ಮಾತ್ರ ನಮ್ಮ ಕಲ್ಪನೆಯನ್ನು ಪ್ರಚೋದಿಸುವುದಿಲ್ಲವೆ ಎಂಬ ಅನುಮಾನ ನನಗಿದೆ. ಈ ಚರ್ಚೆಯಲ್ಲಿ ಈ ಮೊದಲೇ "ಕಸೂತಿ" ಶಬ್ದದ ಅನ್ಯ ರೂಪದ ಅರ್ಥ ಸಾಧ್ಯತೆಗಳ ಬಗ್ಗೆ ನಾನು ಸೂಚಿಸಿದ್ದೇನೆ. ಬಹಳ ವಿಶಾಲವಾಗಿ ನಮ್ಮ ನಾಡಿನ ಮಹಿಳೆಯರ ಸೃಷ್ಟಿಶೀಲತೆ ಹಾಗೂ ಫಲವೆಂಬಂಥ ನೆಲೆಯನ್ನು ಈ ಕಸೂತಿ ಸ್ಪರ್ಶಿಸುವುದಿಲ್ಲ. ಇಲ್ಲಿ ಹೇಳಿರುವ ಕಸೂತಿ ಒಂದು ಕಾಲದಲ್ಲಿ ಸಮಾಜದ ಮೇಲ್ಜಾತಿಯ, ಮಧ್ಯಮವರ್ಗದ ಹೆಣ್ಣು ಮಕ್ಕಳು ಮದುವೆಯಾಗುವವರೆಗೂ ಕಾಲಯಾಪನೆ ಮಾಡಲು ಕಲಿಯುತ್ತಿದ್ದ ಹಾಡು, ಹಸೆ, ಹಾರ್ಮೋನಿಯಂ ಗಳ ಸಾಲಿಗೆ ಸೇರಿದ್ದು. ತತ್ಕಾಲೀನವಾಗಿ ಬೆಳೆಸಿಕೊಂಡ ಈ ಕರಕೌಶಲ್ಯ ಮುಂದೆ ಹವ್ಯಾಸವಾಗಬೇಕಾದರೆ ಅವರ ಬದುಕಲ್ಲಿ ಇರಬಹುದು, ಇಲ್ಲದೆಯೂ ಇರಬಹುದು. ಅದೇ ಅವರ ಬದುಕಲ್ಲ. ಉಷಾ ಕಾದಂಬರಿಯ ಸರಸ್ವತಿ ಸ್ವತ: ಇದೇ ಅರ್ಥಕ್ಕೆ ಒಬ್ಬ ಪ್ರತಿನಿಧಿಯಾಗಿರುವುದನ್ನು ಕಾಣಬಹುದು. ಇಲ್ಲಿ ಕಾದಂಬರಿಗಾರಿಕೆ ಕೂಡ ಒಂದು ರೀತಿಯ ಸೃಜನಶೀಲ ಹವ್ಯಾಸ ಅಥವಾ ಪ್ರಯೋಗದ ರೀತಿಯಲ್ಲೇ ಉಳಿದಂತೆನಿಸುತ್ತದೆ. ಈ ಅನುಮಾನ ಗಳಿದ್ದರೂ ನನ್ನ ಓದಿನಲ್ಲಿ ಕಂಡುಕೊಂಡ ಇತರ ಇತ್ಯಾತ್ಮಕ ಅಂಶಗಳ ಬಗ್ಗೆ ಇಲ್ಲಿ ಹೇಳಲೇ ಬೇಕು.

ಮೊದಲನೆಯದಾಗಿ ಇಪ್ಪತ್ತನೆಯ ಶತಮಾನದ ಆದಿಯಿಂದ ಕೊನೆಯ ದಶಕದವರೆಗಿನ ನಮ್ಮ ನಾಡಿನ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ತೀರಾಸಾಮಾನ್ಯರಾದ ಜನರ ಜೀವನದ ದೃಷ್ಟಿ ಕೋನದಿಂದ ಅವಲೋಕಿಸುವ ಯತ್ನವೆಂದು ಈ ಕಾದಂಬರಿಯನ್ನು ನೋಡಲು ಸಾಧ್ಯವಿದೆ. ಇಂಥ ವಿಷಯವನ್ನು ಕನ್ನಡ ಕಾದಂಬರಿ ಪ್ರಕಾರದಲ್ಲಿ ಸಮೃದ್ಧವಾಗಿ ಕಾಣಬಹುದು. ಆದರೆ ಅನ್ಯ ಸಂಸ್ಕೃತಿ ಯೊಂದಿಗೆ ನೇರವಾಗಿ ಘರ್ಷಣೆಗೆ ತೊಡಗಿ ದವರು, ಚಳುವಳಿಗಾರರು, ಸಮಾಜ ಸುಧಾರಕರು, ಗಾಂಧೀ ವಾದಿಗಳು, ಸ್ವಾತಂತ್ರ್ಯ ಆಂದೋಲನಕಾರರನ್ನು ಕೇಂದ್ರವಾಗಿ ಇಟ್ಟುಕೊಳ್ಳುವ ಕೃತಿಗಳ ರೀತಿಯೇ ಬೇರೆ. ಅಲ್ಲೆಲ್ಲ ಸಮಾಜ, ಮೌಲ್ಯ, ಪರಿವರ್ತನೆ, ಪ್ರಗತಿಗಳ ನಿರ್ಮಾತೃಗಳ ದೃಷ್ಟಿಯಿಂದ ಬದುಕಿಗೆ ಅರ್ಥಹಚ್ಚುವ ಯತ್ನವಿರುತ್ತದೆ. ಆದರೆ ಇಲ್ಲಿ ಆ ಎಲ್ಲಾ ಪ್ರಬಲವಾದ ಇತಿಹಾಸವನ್ನೇ ಬದಿಗೆ ಇಟ್ಟು, ಅದ್ಯಾವುದರಲ್ಲೂ ತೊಡಗಿರದ ಬರೀ ತಮ್ಮ ಪಾಡಿಗೆ ತಾವು ಬದುಕಿರುವವರ ಅನುಭವವೇ ಮುಖ್ಯವಾಗಿರುವಾಗ ಬದಿಗೆ ಸರಿದ ಚರಿತ್ರೆ ಎಲ್ಲೋ ದೂರದ ಧ್ವನಿಯಂತೆ ಕೇಳಿಸುತ್ತದೆ. ಉದಾಹರಣೆಗೆ ಮೂರ್ತಿ ಎಂಬ ಗಾಂಧಿವಾದಿ ಕ್ರಾಂತಿಕಾರಿಯ ಬಗ್ಗೆ ಇಲ್ಲಿನ ನಿರೂಪಣೆ ಹೀಗಿದೆ.

"ನಂಜುಂಡ ಅಮಲ್ದಾರನಾಗಿ ಡಿಪ್ಟಿ ಸಾಹೇಬನಾದ, ಸ್ವಾಮಿ ಮೊದಲು ಮೇಷ್ಟ್ರಾಗಿದ್ದ ಆ ಮೇಲೆ ಹೆಡ್‌ಮೇಷ್ಟ್ರರಾಗಿ ಆ ಮೇಲೆ ಸ್ಕೂಲು ಇನ್ಸ್‌ಪೆಕ್ಟರ್‌ರಾದ, ಇದ್ಯಾವುದೂ ಆಗದೆ ಬಿ.ಎ. ಓದುವಾಗಲೇ ಕಾಲೇಜು ಬಿಟ್ಟು ಅದ್ಯಾವುದೊ ರಾಷ್ಟ್ರೀಯ ವಿದ್ಯಾಶಾಲೆಯೋ ಸುಡುಗಾಡು ವಿದ್ಯಾಶಾಲೆಯೋ ಅದರಲ್ಲಿ ನೂಲುವುದು, ನೇಯುವುದು, ಓದುವುದು ಕಲಿಸುತ್ತ ಖಾದಿಬಟ್ಟೆ ಹಾಕಿಕೊಂಡು ಪುಂಡ ಪೋಕರಿಗಳ ಜೊತೆ ಅಲೆಯುತ್ತ ಲಕ್ನೋ, ಹೈದರಾಬಾದ್, ನಾಗಪುರ, ದೆಹಲಿ ಎಂದು ತಿರುಗುತ್ತ ಐವತ್ತು ರೂಪಾಯಿ ಸಂಬಳ ತಂದು ತಿಂಗಳಿಗೊಂದು ಸಾರಿ ಹೆಂಡತಿಯ ಕೈಲಿಕೊಟ್ಟು ವಾರಕ್ಕೆ ನಾಲ್ಕುಜನ ಗಡ್ಡ ಬಿಟ್ಟ ಖಾದಿ ಜುಬ್ಬದ ಪೋಲಿಗಳನ್ನು ಕರೆದುಕೊಂಡು ಬಂದು ಅವರಿಗೆ ಒಂದು ವಾರ ಅಡುಗೆ ಮಾಡಿ ಹಾಕುವಂತೆ ಹೇಳುವ ಈ ಮನೆಹಾಳ ಮೂರ್ತಿ ಯನ್ನು ಘನ ಸರ್ಕಾರದ ಸೇವೆಯಲ್ಲಿರುವ ಪನ್ನೇರಳೆಯ ಶ್ಯಾನುಭೋಗರು ಮ। ರಾ। ಕೃಷ್ಣಮೂರ್ತಿ ಗಳೂ, ಜಾಜಿಕಲ್ಲಿನ ಪಟೇಲರಾಗಿ ಹೊಸದಾಗಿ ಅಭಿಷಿಕ್ತರಾಗಿರುವ ಮ। ರಾ। ಚನ್ನಕೇಶವ ರಾಯರೂ ಸಹಮತದಿಂದ ಒಟ್ಟಿಗೆ ಬಹಿಷ್ಕರಿಸಿದ್ದಾರೆ".

ಬ್ರಿಟಿಷರ ಆಡಳಿತದಡಿಯಲ್ಲಿ ಸ್ವಂತದ ಬೇಳೆ ಬೇಯಿಸಿಕೊಂಡ, ಅವರ ಪರವಾಗಿಯೇ ಉಳಿದ, ಅಥವಾ ವಿರೋಧಿಸಿದರೆ ತಮಗೇ ಅಪಾಯವೆಂಬ ವ್ಯಾವಹಾರಿಕ ಜಾಣ್ಮೆಯಿಂದ ಬದುಕಿದ ಜನರೇ ಬಹುಸಂಖ್ಯಾತರಾಗಿ ಅಂದಿನ ಬದುಕನ್ನು ನಡೆಸುತ್ತಿದ್ದ ರೀತಿಗೆ ಇದು ಕನ್ನಡಿಯಾಗಿದೆ. ಚರಿತ್ರೆಯೆಂದರೆ ಇಲ್ಲಿ ಬರೀ ಗಾಂಧಿಯದೂ ಅಲ್ಲ, ಗಾಂಧಿವಾದಿಗಳದೂ ಅಲ್ಲ. ಇಡೀ ದೇಶದ ಗುಲಾಮ ಜನರದ್ದೂ ಎಂಬುದನ್ನು ಉಷಾ ಹೇಳುವಂತೆನಿಸುತ್ತದೆ.

ಮೈಸೂರಿನ ಆಳರಸರ ವೈಭವದ ದಿನಗಳು ಮುಗಿಯುತ್ತಾ ಬರತೊಡಗಿದ ಅವಧಿಯಲ್ಲಿ ಅವರ ನೆರಳಲ್ಲೇ ಬದುಕಿದ್ದ ಅಗ್ರಹಾರದ ಮಹಿಳೆಯರು ಅರಮನೆಯ ರಾಣಿ ವಾಸದವರೊಂದಿಗೆ ಬೆಳೆಸಿಕೊಂಡ

ಒಂದು ರೀತಿಯ ಸ್ನೇಹದ ಮೂಲಕ ಆ ಅರಸಿನವರ ಅಂದಿನ ಬದುಕಿನ ಒಳನೋಟವೂ ಇಲ್ಲಿ ಸಿಗುತ್ತದೆ. ಮುಖ್ಯವಾಗಿ ಲಾಯರು ಸುಬ್ಬರಾಜ ಅರಸರನ್ನು ದತ್ತು ತೆಗೆದುಕೊಂಡಿದ್ದ ತಂದೆ ತಾಯಿಗಳಾದ ನರಸಿಂಹರಾಜೇ ಅರಸರು ಮತ್ತು ದೇವಾಜಮ್ಮಣ್ಣಿಯವರ ಕಾಲ ಮುಗಿದಿದೆ. ಹಳೆಯ ಅರಸೊತ್ತಿಗೆಯ ಆಡಂಬರ, ಐಷಾರಾಮಗಳೆಲ್ಲ ಮುಗಿಯುತ್ತ ಬಂದ ಸಂದರ್ಭದಲ್ಲಿ ಅರಸರ ಆಸ್ತಿಯ ದುಡ್ಡಿನಿಂದು ಒಂದು ಟ್ರಸ್ಟ್ ಮಾಡಿ, ಅವರಿಗೆ ಸೇರಿದ್ದ ಮನೆಗಳನ್ನೆಲ್ಲ ಮಾರಿ ಹಾಕಿ, ಹೊಸದಾದ ಸ್ವಂತ ಮನೆ ಕಟ್ಟಿಸಿಕೊಂಡು ಶ್ರೀಮಂತರ ಪರವಾದ ವಕೀಲಿಕೆಯ ವೃತ್ತಿ ಹಿಡಿದು ಬದುಕುವ ಚಿತ್ರವೂ ಈ ಚರಿತ್ರೆಯಲ್ಲಿದೆ. ಶಾನುಭೋಗರು, ಡಿಪ್ಟಿ ಸಾಹೇಬರು ಸ್ಕೂಲು ಇನ್ಸ್‌ಪೆಕ್ಟರುಗಳು, ಗುಮಾಸ್ತೆಗಳ ಬದಿಯಲ್ಲಿ ಇವರ ಚಿತ್ರವೂ ಸಲ್ಲುತ್ತದೆ. ಇಂಥವರ ಮಗ್ಗುಲಲ್ಲೇ 'ತನಗಿನ್ನು ಸರ್ಕಾರದ ತಾಪೇದಾರಿ ಬೇಡ ! ಎಂದು ಮಂಡ್ಯದಲ್ಲಿ ಹೆಡ್‌ಮಾಸ್ಟರ್ ರಂಗರಾಯನೊಡನೆ ಜಗಳ ಮಾಡಿಕೊಂಡು ರಾಜಿನಾಮೆಕೊಟ್ಟು' ಮೈಸೂರಿನ ಬಂದು ಹೊಸ ಮನೆ ಕಟ್ಟಿಸಿಕೊಂಡ ವೆಂಕಣ್ಣಯ್ಯ ಸ್ವತಂತ್ರವಾದ ಎಲ್ಲಾ ಉಪಕರಣಗಳಿಂದ ಕೂಡಿದ, ಸುಸಜ್ಜಿತವಾದ ಲೈಬ್ರರಿ ಇರುವಂಥ ಟ್ಯುಟೋರಿಯಲ್ ಕಾಲೇಜನ್ನು ಸ್ಥಾಪಿಸಿ, ನಿಜವಾಗಿ ವಿದ್ಯಾದಾನದಿಂದ ಸಮಾಜಕ್ಕೂ ಉಪಕಾರಕವಾಗಿ ಬದುಕುವ ಚಿತ್ರವೂ ಇಲ್ಲಿದೆ.

ದೇಶಕ್ಕೆ ಸ್ವಾತಂತ್ರ್ಯ ಬಂದ ಆ ಪ್ರಧಾನ ಚರಿತ್ರೆ ಈ ಕೃತಿಯಲ್ಲಿ ತೀರಾ ಗೌಣ, ಆದರೆ ಶಿಕ್ಷಣದ ಮೂಲಕವಾಗಿ ನಾಡಿನ ಹೆಣ್ಣು ಮಕ್ಕಳ ವ್ಯಕ್ತಿತ್ವ, ಪ್ರಜ್ಞೆಗಳಲ್ಲಿ ಆದ ವಿಕಾಸವನ್ನೂ, ಅವರು ಸಾಧಿಸಿದ ಪ್ರಗತಿಯನ್ನೂ ಕೃತಿಯ ಉದ್ದಕ್ಕೂ ನಿರೂಪಿಸುತ್ತಾರೆ ಉಷಾ.

ಸೈದ್‌ನ ಓರಿಯೆಂಟಲಿಸಂ ಪ್ರಭಾವದಿಂದ ಕನ್ನಡ ದಲ್ಲೂ ವಸಾಹತ್ತೋತ್ತರ ಚಿಂತನೆಗಳಿಗೆ ನಿರ್ದಿಷ್ಟ ಲಕ್ಷಣವೊಂದು ಬಂದಿತಲ್ಲ. 19-20 ನೆಯ ಶತಮಾನ ಗಳ ಸಂಧಿಕಾಲದಲ್ಲಿ ಇಂಡಿಯಾದಲ್ಲಿ ಆದಂಥ ಎಲ್ಲ ಸ್ಥಿತ್ಯಂತರಗಳನ್ನೂ, ಅವುಗಳ ಮೂಲದಲ್ಲಿದ್ದ ಸಾಮಾಜ ಸುಧಾರಣಾ ಚಳವಳಿಗಳನ್ನೂ ಸಮ್ರಾಜ್ಯ ಶಾಹಿಯ ಸ್ವಹಿತಾಸಕ್ತಿಪ್ರೇರಿತವೆಂದೇ ನೋಡುವ, ಅಳೆಯುವ ವಿಚಾರಧಾರೆ ಅದು. ಅನಂತರ ಜಾಗತೀಕರಣಕ್ಕೆ ಪ್ರತಿರೋಧವನ್ನು ಒಡ್ಡಲು ಸ್ವಸಂಸ್ಕೃತಿಯನ್ನು - ಅದರ ಬಹುರೂಪಗಳಲ್ಲಿ ವಿಶೇಷೀಕರಿಸಿ ಎತ್ತಿಹಿಡಿವ ಯತ್ನಗಳು ಹೆಚ್ಚು ಪ್ರಾಮುಖ್ಯ ಪಡೆದವು. ಉಷಾ ಅವರ "ಕಸೂತಿ" ಯನ್ನು ನೋಡಿದಾಗ ಅವರು ಸ್ತ್ರೀಶಿಕ್ಷಣದ ಸಂಬಂಧವಾಗಿ ಆ ಅವಧಿಯಲ್ಲಿ ನಡೆದ ಬೆಳವಣಿಗೆಗಳನ್ನು ಸ್ತ್ರೀಪ್ರಗತಿಯ ಇತಿಹಾಸ ಎಂದೇ ನೋಡಿರುವಂತೆ ತೋರುತ್ತದೆ. ಸಮಾಜದ ಕೆಳಜಾತಿ ವರ್ಗಗಳ ಸ್ತ್ರೀಯರ ಬೇರೆ ಬೇರೆ ಸ್ತರಗಳ ನಿರಕ್ಷರತೆ, ಅಜ್ಞಾನ, ಬಡತನ ಮುಂತಾದ ಯಾವುದನ್ನೂ ಕಾದಂಬರಿಯ ವಿಷಯವು ಒಳಗೊಳ್ಳದೇ ಇರುವುದರಿಂದ ಮೇಲು ಜಾತಿಗಳ ವಿಶೇಷವಾಗಿ ಬ್ರಾಹ್ಮಣ, ಕ್ಷತ್ರಿಯರ ಶ್ರೀಮಂತ ಹಾಗೂ ಮಧ್ಯಮ ವರ್ಗಗಳನ್ನು ಮಾತ್ರ ಈ ಕೃತಿ ಚರ್ಚೆಗೆ ತರುವುದರಿಂದಲೂ ಶಿಕ್ಷಣ = ಸ್ತ್ರೀಪ್ರಗತಿ ಎಂಬ ಸಮೀಕರಣಕ್ಕೆ ಇಲ್ಲಿ ಸುಭವಾಗಿ ಅವಕಾಶ ದೊರೆತಿದೆ.

ಇಡೀ ಕಾದಂಬರಿಯ ಮಹಿಳಾನುಭವಗಳ ಚಲನೆ ಯನ್ನೇ ಅಜ್ಞಾನದಿಂದ ಜ್ಞಾನದತ್ತ ಸಾಗುವ 'ತಮಸೋ ಮಾ ಜ್ಯೋತಿರ್ಗಮಯ' ಎಂಬ ಮೊರೆಯ ಪ್ರಕ್ರಿಯೆ ಯೆಂದೂ ಓದಲು ಸಾಧ್ಯವಿದೆ. ಪಶ್ಚಿಮದ ಸಾಂಸ್ಕೃತಿಕ ಸಾಧನೆಗಳ ಸ್ಪರ್ಶ, ಸಂಪರ್ಕದಿಂದಲೇ ಸ್ತ್ರೀಯರ ಅರಿವಿನ ಹಾದಿ ತೆರೆಯುವ ರೀತಿಯನ್ನೂ ಇಲ್ಲಿ ಕಾಣಬಹುದು. ಉದಾಹರಣೆಗೆ ಮೊದಲ ಪೀಳಿಗೆಯ ಒಬ್ಬ ಮುಖ್ಯ ಮಹಿಳೆಯಾದ ಸರಸ್ವತಿ ಮಿಷನ್ ಶಾಲೆಯಲ್ಲಿ ಎರಡು ವರ್ಷ ಕಲಿಯುತ್ತಾಳೆ. ಅಲ್ಲಿ ಕ್ರಿಶ್ಚಿಯನ್ ಸನ್ಯಾಸಿನಿ ಉಪಾಧ್ಯಾಯಿನಿಯಿಂದ "ಕಸೂತಿ ಡಬ್ಬಿ" ಯ ಉಡು ಗೊರೆ ಸಿಕ್ಕುತ್ತದೆ. ಮುಂದೆ ಗಂಡನೊಂದಿಗೆ ಸಂಸಾರ ಸಾಗಿಸುವಾಗ ಅರಮನೆಯ ಹೆಣ್ಣುಮಕ್ಕಳಿಗೆ ಹೊಲಿಗೆ ಕಸೂತಿ ಕಲಿಸಲು ಕೆಲವು ಕಾಲಕ್ಕೆಂದು ಕರೆಯಿಸಿಕೊಂಡು ಬಂದಿದ್ದ ಚಟ್ಟೇಕಾರ ಮಹಿಳೆ ಸಿಸಿಲಿಯಾ ಅವರಿಂದ ಸರಸ್ವತಿಗೆ ಲಂಗ, ಜಂಪರ್‌ಗಳಂಥ ಉಡುಪನ್ನೇ ತಯಾರಿ ಸುವ ಜ್ಞಾನ, ಸಿಂಗರ್ ಮಿಷನ್ನಿನ ಬಳಕೆಯ ತಿಳುವಳಿಕೆ ಗಳು ಲಭ್ಯವಾಗುತ್ತದೆ.

ಉಷಾ ಚಿತ್ರಣದ ಈ ಚರಿತ್ರೆಯಲ್ಲಿ ಪಶ್ಚಿಮದ ವೈಜ್ಞಾನಿಕ ಆವಿಷ್ಕಾರಗಳೆಲ್ಲ ಆಗಲೆ ಜನರ ದಿನಬಳಕೆಗೆ ಅನುಕೂಲ ಕರವಾಗಿ ರೂಢಿಯಾಗಿ ಹೋಗಿದೆ. ರೈಲಿನಲ್ಲಿ ಸರಾಗವಾಗಿ ಜನ ಎಲ್ಲೆಡೆ ಪ್ರಯಾಣ ಮಾಡುವುದು. ಸಹಜವಾಗಿ ಹೋಗಿದೆ. ಆದರೆ ಹಳ್ಳಿ ಹುಡುಗಿ ಸೀತೆ ಮೊದಲ ಬಾರಿ ರೈಲನ್ನೇ ಕಂಡಾಗ ಹೆದರಿ ಕಿರುಚಿ ಅದನ್ನೇ ಏರಲು ನಿರಾಕರಿಸಿದಳು ಎಂಬುದನ್ನು ಬಿಟ್ಟರೆ ಪರಸಂಸ್ಕೃತಿ, ನವನಾಗರೀಕತೆಗಳು ಜನರಿಗೆ ದೊಡ್ಡ ಆಘಾತಕರ ಸಂಗತಿಗಳಾಗಿ ಏನೂ ಉಳಿದಿಲ್ಲ. ಎಲ್ಲೋ ಸುಬ್ಬಮ್ಮನಂಥ ತೀರಾ ಜಡ್ಡುಗಟ್ಟಿದ ಸಂಪ್ರದಾಯಸ್ಥರಷ್ಟೇ ಈ ಬಗೆಯ ಬೆಳವಣಿಗೆಗಳಿಗೆಲ್ಲ ಅಪಸ್ವರ ಎತ್ತಿಯಾರು. ಉಳಿದಂತೆ ಇಲ್ಲಿ ಎಲ್ಲರೂ ಬದಲಾವಣೆಗೆಗಳಿಗೆ ಹೇಗೋ ಒಗ್ಗಿಕೊಳ್ಳುತ್ತಾ ಸಾಗುತ್ತಾರೆ. ನರಸಿಂಹರಾಜ ಅರಸರು, ದೇವರಾಜಮ್ಮಣಿಗಳ ದತ್ತು ಪುತ್ರರಾದ ಸುಬ್ಬರಾಜ ಅರಸರು ಅರಸೊತ್ತಿಗೆಯ ದಿನಗಳು ಮುಗಿದವೆಂಬುದನ್ನು ಅರಿತು ಅರಮನೆಯ ಆಸ್ತಿಯನ್ನು ಬಳಸಿ ಟ್ರಸ್ಟ್‌ವೊಂದನ್ನು ಸ್ಥಾಪಿಸಿ, ತಾವು ಶ್ರೀಮಂತರ ವಕೀಲರಾಗಿ ಆ ವೃತ್ತಿಯಲ್ಲೇ ಮೇಲೇರುತ್ತಾರೆ. ಶ್ಯಾನುಭೋಗರು, ಡೆಪ್ಟಿ ಸಾಹೇಬರು, ಸ್ಕೂಲ್ ಇನ್ಸ್‌ಪೆಕ್ಟರು, ಗುಮಾಸ್ತರಾಗಿರುತ್ತಿದ್ದ ಬ್ರಾಹ್ಮಣರು ಆಂಗ್ಲ ದೊರೆಗಳ ಸರ್ಕಾರದ ಬಾಲ ಬಡುಕರಾಗಿ ಕ್ಷೇಮವಾಗಿ ಬದುಕುತ್ತಾರೆ. ದೇಶದಾದ್ಯಂತ ಹೊತ್ತಿ ಉರಿದ ಸ್ವಾತಂತ್ರ್ಯದ ಚಳುವಳಿಯ ಬೆಂಕಿ ಇವರಾರನ್ನು ತಟ್ಟದು. ಗಾಂಧೀಜಿ ಅವರ ಅಹಿಂಸಾ

CPMG/KA/BGS-8/2006-08 RNI NO.45577/88
Posted at Basavanagudi P.O. on the 25/29th of the every month
June - 2007

ತ್ಮಕ ಸ್ವಾತಂತ್ರ್ಯ ಹೋರಾಟವಾಗಲಿ, ಗಾಂಧಿ ವಾದಿಗಳ ಸಮಾಜ ಸುಧಾರಕರ ಪ್ರಗತಿಪರ ಸಾಮಾಜಿಕ ಕಾರ್ಯಗಳಾಗಲೀ ಇಲ್ಲಿ ನೇತ್ಯಾತ್ಮಕ ಸಂಗತಿಗಳಾಗಿ ಬೆಲೆ ಪಡೆಯುವುದು ಸಂಪ್ರದಾಯಸ್ಥರ ದೃಷ್ಟಿಕೋನದಿಂದ ಎಂಬುದನ್ನು ಹಿಂದೆಯೇ ಗಮನಿಸಲಾಗಿದೆ. ಆದರೆ ಅದೇ ಗಾಂಧೀವಾದಿ ಮೂರ್ತಿಯ ಪತ್ನಿ ಸೀತೆ, ಓದಿದಷ್ಟೂ ಸಾಲದೆನ್ನುವ ವಿದ್ಯಾದಾಹಿಯಾಗಿ ಇತರ ಮಹಿಳೆಯರನ್ನೂ ವಿದ್ಯಾದಾನದಿಂದ ಮೇಲಕ್ಕೆ ತರುವಂಥ "ಸೀತಾಸದನ"ದ ಸ್ಥಾಪಕಿಯರಾಗುತ್ತಾಳೆ.

ಉಷಾ ಅವರ ಕಥೆಯಲ್ಲಿ ಅವರು ಚಿತ್ರಿಸುವ 'ಸ್ತ್ರೀಯರ ಬಳಗ' - ಏಕನಾಯಕಿ ಕೇಂದ್ರಿಕತೆಗೆ ವ್ಯತಿರೇಕವಾಗಿ ಬಹುಜನ ನಾಯಕಿಯರ ಚಿತ್ರವಾಗಿದೆ. ಸ್ತ್ರೀವಾದವು ಪ್ರತಿಪಾದಿಸುವ ಬಹುಮುಖ್ಯ ಕಥನಕಲೆಯ ಹಾಗೂ ಜೀವನದ ಸ್ತ್ರೀನಿಷ್ಟ ತತ್ತ್ವವೆಂದರೆ 'ಬಹುರೂಪತ್ವ' ಏಕಾಧಿಕಾರದ ಕೇಂದ್ರ. ನಿಯಂತ್ರಣದ ರಾಜಕೀಯಕ್ಕೆ ಪ್ರತಿಯಾಗಿ ಸ್ತ್ರೀವಾದಿಗಳು ವಿಕೇಂದ್ರೀಕೃತವಾದ, ಪದಾಧಿಕಾರವನ್ನು ನಿರಾಕರಿಸುವ ಸೋದರೀತ್ವದ ರಾಜಕೀಯವನ್ನು ಮುಂದಿಟ್ಟಿದ್ದಾರೆ. ಮಹಿಳೆಯರು ಬದುಕಲ್ಲಿ ಮಾನವ ಸಂಬಂಧಗಳಲ್ಲಿ ತೊಡಗುವಿಕೆಯೂ ಬಹುರೂಪದ್ದಾಗಿರುತ್ತದೆ. ಇಂಡಿಯಾದಲ್ಲಿ ಮದುವೆ ಮೂಲಕ ಗಂಡು ಗಳಿಸುವುದು ಒಂದು ಹೆಣ್ಣನ್ನು ಒಬ್ಬ ಸಂಗಾತಿಯನ್ನು. ಹೆಣ್ಣು ಆದರೆ ಅದೇ ಮದುವೆಯ ಮೂಲಕ ಒಂದು ಕುಟುಂಬವನ್ನು, ಆ ಪರಿವಾರದ ಅನೇಕ ಬಗೆಯ ಬಾಂಧವ್ಯದ ನೆಲೆಗಳನ್ನೂ ಗಳಿಸುತ್ತಾಳೆ. ಮಹಿಳೆಯರ ಲೈಂಗಿಕಾನುಭೂತಿ ಕೂಡ ಪುರುಷರದರಂತೆ ಏಕಾಂಗ ಕೇಂದ್ರಿತವಲ್ಲ. ಅನೇಕ ಅಂಗಗಳಲ್ಲಿ ರಸಸ್ರಾವಿಯಾಗಿ ಅಲೆಯಲೆಯಾಗಿ ಸರ್ವಾಂಗ ವ್ಯಾಪಿಯಾದ ಬಹುಮುಖಿ ಅನುಭವವದು ಎಂದು ಪ್ರತಿಪಾದಿಸುವುದೂ ಉಂಟು. ಈ ನಿಟ್ಟಿನಿಂದ ನೋಡುವಾಗ ಉಷಾ ಅವರ ಕಾದಂಬರಿಯಲ್ಲಿ ಸ್ವಂತ ವ್ಯಕ್ತಿತ್ವದ ಉಜ್ಜಲತೆ, ಅಂತಃಕರಣದ ಗುಣ, ಉಜ್ಜಲವಾದ ಪ್ರತಿಭೆ, ಜೀವನ ಚೈತನ್ಯಗಳಿಂದ ತಮ್ಮಷ್ಟಕ್ಕೇ ಮಿನುಗುವ ತಾರೆಗಳಂತೆ 'ಸ್ವಯಂಪ್ರಭೆ' ಯರಾದ ಅನೇಕ ನಾಯಕಿಯರ ಪರಂಪರೆಯು ಸೃಷ್ಟಿಯಾಗಿರುವುದು ಮಹತ್ವದ ಸಂಗತಿಯಾಗಿದೆ. ಹಾಗೆಯೇ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ತತ್ವಕ್ಕೆ ಕೊಡುಗೆಯಾಗಬಹುದಾದಂಥ 'ಸೃಜನಶೀಲತೆ' ಕುರಿತ ಚರ್ಚೆಯೊಂದು ಈ ಕೃತಿಯಿಂದ ಹುಟ್ಟಲು ಸಾಧ್ಯವಿದೆ. ಇಂಥ ಕೃತಿಯ ಮಿತಿಗಳೇನೇ ಇದ್ದರೂ ಅದರ ಇತ್ಯಾತ್ಮಕತೆ ನಿಜವಾಗಿ ಮಹತ್ವದ್ದೆಂದೇ ನನ್ನ ನಂಬಿಕೆ. *

To : Smt / Sri

"Achala" 108, Skyline Surabhi,
14-P, Vidyapeeta Road,
BSK 3rd Stage,
Bangalore - 560 085